# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೨, ೨೦೧೬ (ಭಾದ್ರಪದ ೩೧, ಶಕ ವರ್ಷ ೧೯೩೮)<br>Bengaluru, Thursday, September 22, 2016 ( Bhadrapada 31, Shaka Varsha 1938) | ಸಂಚಿಕೆ ೩೮<br>Issue 38 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಸೇರ್ಪಡೆ**

**ಸಂಖ್ಯೆ : ಡಿಪಿಎಆರ್ 02 ಹೆಚ್‌ಡಬ್ಲ್ಯೂಪಿ 2016, ಬೆಂಗಳೂರು, ದಿನಾಂಕ: 06–06–2016.**

**ಕರ್ನಾಟಕ ರಾಜ್ಯದ ಆದ್ಯತಾ ಸೂಚಿ ಪಟ್ಟಿಯ ಕ್ರಮ ಸಂಖ್ಯೆ: 18ರಲ್ಲಿ ಈ ಕೆಳಗಿನವರನ್ನು ಸೇರಿಸಲಾಗಿದೆ;**

"ಕ್ಯಾಬಿನೆಟ್ ದರ್ಜೆ ಸಚಿವರ ಸ್ಥಾನಮಾನ ನೀಡಿರುವಂತಹ ವ್ಯಕ್ತಿಗಳು ಶಾಸಕರಾಗಿರಲಿ ಅಥವಾ ಶಾಸಕರಾಗಿದಲ್ಲದಿರಲಿ ಅಂತಹವರ ಸ್ಥಾನಮಾನವನ್ನು ಹೊಂದಿರುವ ವ್ಯಕ್ತಿಗಳು".

**ಕರ್ನಾಟಕ ರಾಜ್ಯದ ಆದ್ಯತಾ ಸೂಚಿ ಪಟ್ಟಿಯ ಕ್ರಮ ಸಂಖ್ಯೆ: 19ರಲ್ಲಿ ಈ ಕೆಳಗಿನವರನ್ನು ಸೇರಿಸಲಾಗಿದೆ;**

"ರಾಜ್ಯ ದರ್ಜೆ ಸಚಿವರ ಸ್ಥಾನಮಾನ ನೀಡಿರುವಂತಹ ವ್ಯಕ್ತಿಗಳು ಶಾಸಕರಾಗಿರಲಿ ಅಥವಾ ಶಾಸಕರಾಗಿದಲ್ಲದಿರಲಿ ಅಂತಹವರ ಸ್ಥಾನಮಾನವನ್ನು ಹೊಂದಿರುವ ವ್ಯಕ್ತಿಗಳು".

ಈ ಮೇಲೆ ತಿಳಿಸಿರುವ ಸಚಿವರ ಸ್ಥಾನಮಾನ ಹೊಂದಿರುವ ವ್ಯಕ್ತಿಗಳಿಗೆ ಕರ್ನಾಟಕ ರಾಜ್ಯ ಆದ್ಯತಾ ಸೂಚಿ ಪಟ್ಟಿಯಲ್ಲಿ ಈ ಮೇಲೆ ತಿಳಿಸಿದ ಕ್ರಮಾಂಕವು ಈ ತಕ್ಷಣ ಜಾರಿಗೆ ಬರುವಂತೆ ಸೇರಿಸಲಾಗಿದೆ.

PR. 425

SC. 200

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ॥ ಬಿ.ಎಸ್. ಮಂಜುನಾಥ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ರಾಜ್ಯ ಶಿಷ್ಟಾಚಾರ)

### ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ: ಆನಾಸ 114 ಡಿಆರ್‌ಎ 2016 (ಭಾಗ–2), ಬೆಂಗಳೂರು, ದಿನಾಂಕ: 04–06–2016.**

**ವಿಷಯ :** 'ಸೀಮೆಎಣ್ಣೆ ಕೂಪನ್' ಅನ್ನು ಕಿಯೋಸ್ಕ್ ಮೂಲಕ ಸೃಜಿಸುವುದಕ್ಕೆ ಹಾಗೂ ಅಪ್‌ಲೋಡ್ ಮಾಡಲು ಸೇವಾ ಶುಲ್ಕ ಪಾವತಿಸುವ ಬಗ್ಗೆ

ಸರ್ಕಾರದ ಆದೇಶ ಸಂಖ್ಯೆ: ಆನಾಸ 114 ಡಿಆರ್‌ಎ 2016 (ಭಾಗ–1), ಬೆಂಗಳೂರು ದಿನಾಂಕ: 25.05.2016ರ ಆದೇಶದ ಭಾಗವನ್ನು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

"ಸೀಮೆಎಣ್ಣೆ ಕೂಪನ್ ಅನ್ನು ಕಿಯೋಸ್ಕ್ ಮೂಲಕ ಸೃಜಿಸಲು ತಗಲುವ ಸೇವಾ ಶುಲ್ಕ ರೂ.3/– ರಂತೆ ಹಾಗೂ ನೈಜ ವೇಳೆಯ (real time) ಅಂದರೆ ವಿತರಣಾ ಸಮಯದಲ್ಲಿ ಕೂಪನ್ ಮಾಹಿತಿಯನ್ನು ಅಪ್‌ಲೋಡ್ ಮಾಡಲು ತಗಲುವ ಸೇವಾ ಶುಲ್ಕವನ್ನು 20 ಪೈಸೆಯಿಂದ 75 ಪೈಸೆಗೆ (ಇಪ್ಪತ್ತೈದು ಪೈಸೆ) ಹೆಚ್ಚಿಸಲಾಗಿದೆ. ಆದರೆ, ಆಫ್‌ಲೈನ್‌ನಲ್ಲಿ ಅಂದರೆ ವಿತರಣೆ ಮುಗಿದ ನಂತರ ಒಂದು ದಿನದ ಅಥವಾ ಕೆಲವು ದಿನಗಳ ಕೂಪನ್ ಮಾಹಿತಿಯನ್ನು ದೊಡ್ಡ (bulk) ಪ್ರಮಾಣದಲ್ಲಿ ಅಪ್‌ಲೋಡ್ ಮಾಡಿದಲ್ಲಿ ಈ ಹಿಂದಿನಂತೆ ಪ್ರತಿ ಕೂಪನ್‌ಗೆ 20 ಪೈಸೆಯಂತೆ ಮುಂದುವರೆಸಲಾಗಿದೆ. ಆದಾಗ್ಯೂ, ನ್ಯಾಯಬೆಲೆ ಅಂಗಡಿ ವರ್ತಕರು ಇಲಾಖೆಯಿಂದ ಸರಬರಾಜು ಮಾಡಿದ POS ಯಂತ್ರವನ್ನು ಹೊರತುಪಡಿಸಿ, ತಮ್ಮ ಬಂಡವಾಳದಿಂದ POS

ಯಂತ್ರವನ್ನು ಖರೀದಿಸಿದ್ದಲ್ಲಿ, ಅದರ ಮೂಲಕ ಕೂಪನ್ ಅನ್ನು ನ್ಯಾಯಬೆಲೆ ಅಂಗಡಿಯಲ್ಲಿ ಸೃಜಿಸಲು ಹಾಗೂ ಅಪ್‌ಲೋಡ್ ಮಾಡಲು ತಗಲುವ ವೆಚ್ಚವನ್ನು ರೂ. 3/–ಗಳಿಗೆ ಸೀಮಿತಗೊಳಿಸಿ ಆದೇಶಿಸಿದೆ. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8443–00–106–0–01 P.D. Account No. 02001006(105051) ರಡಿ ಭರಿಸಲು ಅನುಮತಿಸಿದೆ."

**PR. 426**

**SC. 200**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವಾಲಯ

**ವಿಷಯ:** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಗೆ ಸಂಬಂಧಿಸಿದಂತೆ ಇಲಾಖಾ ತಾಂತ್ರಿಕ ಸಲಹಾ ಸಮಿತಿಯನ್ನು ಪುನರ್ ರಚನೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಪಿಡಿ 121 ಸಿಸಿಎಸ್ 1997, ದಿನಾಂಕ: 31.12.1999.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಇಆಇ 2015, ದಿನಾಂಕ: 04.12.2015.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಸರ್ಕಾರಿ ಇಲಾಖೆಗಳಿಗೆ ಹಾರ್ಡ್‌ವೇರ್, ಸಾಫ್ಟ್‌ವೇರ್, ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯುವ ಸಲುವಾಗಿ ಹಾಗೂ ವಿವಿಧ ಇಲಾಖೆಗಳ ಗಣಕೀಕರಣದ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಲು ಇಲಾಖಾ ತಾಂತ್ರಿಕ ಸಲಹಾ ಸಮಿತಿಗಳಲ್ಲಿ ತಾಂತ್ರಿಕ ತಜ್ಞರನ್ನು ನಾಮನಿರ್ದೇಶನ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಆದೇಶದಲ್ಲಿ ಹಲವು ತಾಂತ್ರಿಕ ತಜ್ಞರು ಸ್ವಯಂನಿವೃತ್ತಿ/ರಾಜೀನಾಮೆ/ವಯೋನಿವೃತ್ತಿ ಹೊಂದಿರುವುದರಿಂದ ಹೊಸದಾಗಿ ತಾಂತ್ರಿಕ ತಜ್ಞರನ್ನು ನೇಮಕ ಮಾಡುವ ಸಲುವಾಗಿ ಸಿಆಸುಇ (ಇ–ಆಡಳಿತ) ದಿನಾಂಕ: 04.12.2015 ರಂದು ಆದೇಶ ಹೊರಡಿಸಿದೆ. ಅದರನ್ವಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಗೆ ನೇಮಿಸಲ್ಪಟ್ಟಿರುವ ತಾಂತ್ರಿಕ ತಜ್ಞರು ಹಾಗೂ ಸದಸ್ಯರೊಂದಿಗೆ ತಾಂತ್ರಿಕ ಸಲಹಾ ಸಮಿತಿಗಳನ್ನು ಪುನರ್ ರಚಿಸಬೇಕೆಂದು ಆದೇಶಿಸಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 16 ಪಿಹೆಚ್‌ಪಿ 2016, ಬೆಂಗಳೂರು, ದಿನಾಂಕ: 08.06.2016**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಅಧೀನ ಇಲಾಖೆಗಳಿಗೆ ಸಂಬಂಧಿಸಿದಂತೆ ಹಾರ್ಡ್‌ವೇರ್, ಸಾಫ್ಟ್‌ವೇರ್, ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯುವ ಸಲುವಾಗಿ ಹಾಗೂ ವಿವಿಧ ಇಲಾಖೆಗಳ ಗಣಕೀಕರಣದ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಲು ತಾಂತ್ರಿಕ ಸಲಹಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1 | ಸರ್ಕಾರದ ಪ್ರಧಾನ/ಅಪರ ಮುಖ್ಯ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು | ಅಧ್ಯಕ್ಷರು |
| 2 | ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಬೆಂಗಳೂರು | ಸದಸ್ಯರು |
| 3 | ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು | ಸದಸ್ಯರು |
| 4 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು | ಸದಸ್ಯರು |
| 5 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಆಯೋಗ, ಬೆಂಗಳೂರು | ಸದಸ್ಯರು |
| 6 | ಕಾರ್ಯದರ್ಶಿ, ಬಾಲಭವನ ಸೊಸೈಟಿ, ಬೆಂಗಳೂರು | ಸದಸ್ಯರು |
| 7 | ಸರ್ಕಾರದ ಕಾರ್ಯದರ್ಶಿ ಅಥವಾ ಅವರ ಪ್ರತಿನಿಧಿ, ಆರ್ಥಿಕ ಇಲಾಖೆ | ಸದಸ್ಯರು |
| 8 | ನಿರ್ದೇಶಕರು, ಜನಶಕ್ತಿ ಮತ್ತು ಉದ್ಯೋಗ ವಿಭಾಗ, ಯೋಜನಾ ಇಲಾಖೆ ಅಥವಾ ಅವರ ಪ್ರತಿನಿಧಿ | ಸದಸ್ಯರು |
| 9 | Systems Analyst Or Junior Programmer | ನೋಡಲ್ ಅಧಿಕಾರಿ |
| 10 | Sri. PG Diwakar,<br>Head, Regional Remote Sensing Service Centre, 40th Main, Eshwaranagar, Banashankari II Stage, Bengaluru-560 070.<br>Off: 26713903 Res: 26661699 Fax: 26718059<br>e-mail:diwakar@isro.org | ತಾಂತ್ರಿಕ ತಜ್ಞರು |
| 11 | Prof. D. Krishna Sundar,<br>Production & Operations Management, Indian Institute of Management Bannergatta Road, Bengaluru-560 076<br>Off: 26993276 Fax: 26584050<br>e-mail:diathat@iimb.emet.in | ತಾಂತ್ರಿಕ ತಜ್ಞರು |

| | | |
|---|---|---|
| 12 | Justin Sagayaraj M., Scientist 'G', Electonics & Radar Development Establishment, Bengaluru-560 093 Tel: 25025421 Mob: 9449824967 | ತಾಂತ್ರಿಕ ತಜ್ಞರು |
| 13 | ಸರ್ಕಾರದ ಉಪ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

ಮೇಲ್ಕಂಡ ಕ್ರ.ಸಂ. (2) ರಿಂದ (6)ರಲ್ಲಿನ ಅಧಿಕಾರಿಗಳು ಅವರವರ ಇಲಾಖೆಗಳಿಗೆ ಸಂಬಂಧಿಸಿದಂತಹ ಗಣಕೀಕರಣದ ಬಗ್ಗೆ ಸೇವೆಯನ್ನು ಪಡೆಯುವ ಸಂದರ್ಭದಲ್ಲಿ ಮಾತ್ರ ತಾಂತ್ರಿಕ ಸಲಹಾ ಸಮಿತಿ ಸಭೆಯಲ್ಲಿ ಭಾಗವಹಿಸಿ ಉಪಯುಕ್ತ ಸಲಹೆಗಳನ್ನು ನೀಡುವುದು.

ತಾಂತ್ರಿಕ ಸಲಹಾ ಸಮಿತಿಯ ಸಭೆಯನ್ನು ಏರ್ಪಡಿಸುವಾಗ ಇಬ್ಬರು ತಾಂತ್ರಿಕ ತಜ್ಞರನ್ನೂ ಸಹ ಸಭೆಗೆ ಕಡ್ಡಾಯವಾಗಿ ಕರೆಯುವುದು.

PR. 427

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಯಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ದಂತ ಆರೋಗ್ಯಾಧಿಕಾರಿ ಹುದ್ದೆಗಳನ್ನು ಮಿಸ್–ಮ್ಯಾಚ್ ಅಡಿಯಲ್ಲಿ ಜಿಲ್ಲಾ ಆಸ್ಪತ್ರೆಗಳಿಗೆ ಸ್ಥಳಾಂತರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆಕುಕ 346 ಹೆಚ್ಎಸ್ಹೆಚ್ 2015, ದಿನಾಂಕ: 19.08.2015
2. ಸರ್ಕಾರಿ ಆದೇಶ ಸಂಖ್ಯೆ: ಆಕುಕ 410 ಹೆಚ್ಎಸ್ಹೆಚ್ 2015 (ಭಾಗ–3) ದಿನಾಂಕ: 07.01.2016
3. ಆಯುಕ್ತರ ಪತ್ರ ಸಂಖ್ಯೆ: ಜೆಆರ್ಓ (5)/95/2015–16, ದಿನಾಂಕ: 04.04.2016

**ಪ್ರಸ್ತಾವನೆ :**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಜಿಲ್ಲಾ ಆಸ್ಪತ್ರೆ/ತಾಲ್ಲೂಕು ಆಸ್ಪತ್ರೆಗಳಲ್ಲಿ ಒಂದೇ ದಂತ ಕುರ್ಚಿ ಇದ್ದು, ಇಬ್ಬರು ದಂತ ಆರೋಗ್ಯಾಧಿಕಾರಿಗಳು ಸೇವೆ ಸಲ್ಲಿಸುತ್ತಿದ್ದಲ್ಲಿ ಒಂದು ದಂತ ಆರೋಗ್ಯಾಧಿಕಾರಿ ಹುದ್ದೆಯನ್ನು ಸ್ಥಳಾಂತರಿಸತಕ್ಕದ್ದು, ಒಂದು ವೇಳೆ ಎರಡು ದಂತ ಕುರ್ಚಿಗಳು ಲಭ್ಯವಿದ್ದು, ಎರಡು ದಂತ ಆರೋಗ್ಯಾಧಿಕಾರಿ ಹುದ್ದೆಗಳು ಮಂಜೂರಾಗಿದ್ದಲ್ಲಿ ಅಂತಹ ಕಡೆ ಒಬ್ಬ ಸ್ನಾತಕೋತ್ತರ ಪದವಿ ಹೊಂದಿದ ದಂತ ಆರೋಗ್ಯಾಧಿಕಾರಿಯನ್ನು ಕಡ್ಡಾಯವಾಗಿ ನೇಮಿಸತಕ್ಕದ್ದು ಎಂದು ಮೇಲೆ ಓದಲಾದ ಕ್ರಮಾಂಕ (1) ರಲ್ಲಿ ಆದೇಶವಾಗಿರುತ್ತದೆ.

ಹಾಗೂ, ತಾಲ್ಲೂಕು ಮಟ್ಟದ 100 ಹಾಸಿಗೆಗಳ ಆಸ್ಪತ್ರೆಗಳಲ್ಲಿ ಒಂದೇ ತಜ್ಞತೆಯ ಎರಡು ಹುದ್ದೆಗಳು ಮಂಜೂರಾಗಿದ್ದಲ್ಲಿ, ಒಂದು ತಜ್ಞತೆಯ ಹುದ್ದೆಯನ್ನು ಮಾತ್ರ ಭರ್ತಿ ಮಾಡತಕ್ಕದ್ದು, ಹೆಚ್ಚುವರಿ ಹುದ್ದೆಯನ್ನು ಇತರೆಡೆ ಅವಶ್ಯವಿರುವ ಹಾಗೂ ಖಾಲಿಯಿರುವ ಸ್ಥಳಕ್ಕೆ ಮರುಹಂಚಿಕೆ ಮಾಡತಕ್ಕದ್ದು ಎಂದು ಮೇಲೆ ಓದಲಾದ ಕ್ರಮಾಂಕ (2) ರಲ್ಲಿ ಆದೇಶವಾಗಿರುತ್ತದೆ.

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರು ಮೇಲೆ ಓದಲಾದ ಕ್ರಮಾಂಕ (3) ರ ಪತ್ರದಲ್ಲಿ, ರಾಜ್ಯದ 30 ಜಿಲ್ಲೆಗಳಲ್ಲಿನ ಜಿಲ್ಲಾಸ್ಪತ್ರೆಗಳ ಪೈಕಿ ಕೆಲವು ಜಿಲ್ಲಾಸ್ಪತ್ರೆಗಳಲ್ಲಿ ಮಾತ್ರ ಎರಡು ದಂತ ಆರೋಗ್ಯಾಧಿಕಾರಿ ಹುದ್ದೆಗಳು ಮಂಜೂರಾಗಿರುತ್ತದೆ. ಇನ್ನುಳಿದ ಜಿಲ್ಲೆಗಳಲ್ಲಿ ಕೇವಲ ಒಂದು ಹುದ್ದೆ ಮಾತ್ರ ಮಂಜೂರಾಗಿರುತ್ತದೆ. ಮೊದಲು ಎಲ್ಲಾ ಜಿಲ್ಲಾ ಆಸ್ಪತ್ರೆಗಳಿಗೆ ಎರಡು ದಂತ ಆರೋಗ್ಯಾಧಿಕಾರಿ ಹುದ್ದೆಗಳು ಸ್ಥಾಪಿಸಬೇಕಾಗಿರುತ್ತದೆ. ಹಾಲಿ ತಾಲ್ಲೂಕು ಆಸ್ಪತ್ರೆಗಳಿಗೆ ಒಂದೇ ಹುದ್ದೆ ಭರ್ತಿ ಮಾಡಬೇಕು ಎಂದು ಆದೇಶವಾಗಿರುವುದರಿಂದ ಎರಡು ಹುದ್ದೆಗಳು ಮಂಜೂರಾದಂತಹ ತಾಲ್ಲೂಕು ಆಸ್ಪತ್ರೆಗಳಿಂದ ಒಂದು ದಂತ ಆರೋಗ್ಯಾಧಿಕಾರಿ ಹುದ್ದೆಯನ್ನು ಜಿಲ್ಲೆ ಮಟ್ಟದ ಆಸ್ಪತ್ರೆಗೆ ಸ್ಥಳಾಂತರಿಸಿ, ಈ ರೀತಿ ಜಿಲ್ಲಾಸ್ಪತ್ರೆಗಳಲ್ಲಿ ಎರಡು ದಂತ ಆರೋಗ್ಯಾಧಿಕಾರಿ ಹುದ್ದೆಗಳನ್ನು ಸ್ಥಾಪಿಸಿದ ನಂತರ ಒಂದು ಹುದ್ದೆಗೆ ಎಂಡಿಎಸ್ ಸ್ನಾತಕೋತ್ತರ ವ್ಯಾಸಂಗ ಪೂರೈಸಿರುವ ಹಿರಿಯ ದಂತ ಆರೋಗ್ಯಾಧಿಕಾರಿಯನ್ನು ಹಾಗೂ ಇನ್ನೊಂದು ಹುದ್ದೆಯಲ್ಲಿ ಬಿಡಿಎಸ್ ಪದವಿ ಹೊಂದಿದ ದಂತ ಆರೋಗ್ಯಾಧಿಕಾರಿಯನ್ನು ಜೇಷ್ಠತೆಯ ಆಧಾರದನ್ವಯ ಆಯಾ ಜಿಲ್ಲೆಯಲ್ಲಿರುವ/ಹತ್ತಿರವಿರುವ ಆಸ್ಪತ್ರೆಯಿಂದ ಕೌನ್ಸಿಲಿಂಗ್ ಮೂಲಕ ಸ್ಥಳಾಂತರಿಸಬಹುದಾಗಿದ್ದು, ಇದರಿಂದ ಸರ್ಕಾರಕ್ಕೆ ಯಾವುದೇ ರೀತಿಯ ಆರ್ಥಿಕ ಹೊರೆ ಉಂಟಾಗುವುದಿಲ್ಲ ಎಂದು ತಿಳಿಸಿ, ಹುದ್ದೆಗಳನ್ನು ಸ್ಥಳಾಂತರಿಸಲು ಸರ್ಕಾರದ ಮಂಜೂರಾತಿ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಸಾರ್ವಜನಿಕ ಹಿತದೃಷ್ಠಿಯಿಂದ ಜಿಲ್ಲಾ/ಜಿಲ್ಲಾ ಮಟ್ಟದ ಆಸ್ಪತ್ರೆಗಳಲ್ಲಿ 2 ದಂತ ಆರೋಗ್ಯಾಧಿಕಾರಿ ಹುದ್ದೆಗಳ ಅಗತ್ಯತೆಯನ್ನು ಮನಗಂಡು, 2 ದಂತ ಆರೋಗ್ಯಾಧಿಕಾರಿ ಹುದ್ದೆಗಳು ಮಂಜೂರಾಗಿರುವ ತಾಲ್ಲೂಕು ಆಸ್ಪತ್ರೆಗಳಿಂದ ಒಂದು ದಂತ ಆರೋಗ್ಯಾಧಿಕಾರಿ ಹುದ್ದೆಯನ್ನು ಅವಶ್ಯಕತೆಗೆ ಅನುಗುಣವಾಗಿ ಜಿಲ್ಲಾ ಆಸ್ಪತ್ರೆಗೆ ಲೀನ್ ಸಮೇತ ಸ್ಥಳಾಂತರಿಸಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 42 ಹೆಚ್ಎಸ್ಡಿ 2016, ಬೆಂಗಳೂರು, ದಿನಾಂಕ: 25.05.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕೆಳಕಂಡ ಆಸ್ಪತ್ರೆಗಳಲ್ಲಿ ಇರುವ ಎರಡು ದಂತ ಆರೋಗ್ಯಾಧಿಕಾರಿ ಹುದ್ದೆಗಳಲ್ಲಿ ಒಂದು ದಂತ ಆರೋಗ್ಯಾಧಿಕಾರಿ ಹುದ್ದೆಯನ್ನು ಲೀನ್ ಸಮೇತ ಅವುಗಳ ಮುಂದೆ ನಮೂದಿಸಿದ ಜಿಲ್ಲಾ/ಜಿಲ್ಲಾ ಮಟ್ಟದ ಆಸ್ಪತ್ರೆಗಳಿಗೆ ಸಾರ್ವಜನಿಕ ಹಿತದೃಷ್ಠಿಯಿಂದ ಸ್ಥಳಾಂತರಿಸಿ ಸರ್ಕಾರವು ಪುನರ್ ಸ್ಥಾಪಿಸಿದೆ.

| ಕ್ರ. ಸಂ. | ಎರಡು ದಂತ ಆರೋಗ್ಯಾಧಿಕಾರಿ ಹುದ್ದೆ ಮಂಜೂರಾಗಿರುವ ತಾಲ್ಲೂಕು ಆಸ್ಪತ್ರೆಗಳು | ಒಂದು ದಂತ ಆರೋಗ್ಯಾಧಿಕಾರಿ ಹುದ್ದೆ ಸ್ಥಳಾಂತರಿಸಿದ ಆಸ್ಪತ್ರೆಗಳು |
|---|---|---|
| (1) | (2) | (3) |
| 1 | ತಾಲ್ಲೂಕು ಆಸ್ಪತ್ರೆ, ಶಿರಾ ತುಮಕೂರು ಜಿಲ್ಲೆ | ಸರ್ ಸಿ.ವಿ. ರಾಮನ್ ಸಾರ್ವಜನಿಕ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು |
| 2 | ತಾಲ್ಲೂಕು ಆಸ್ಪತ್ರೆ, ಮುಳಬಾಗಿಲು, ಕೋಲಾರ ಜಿಲ್ಲೆ | ಎಸ್.ಎನ್.ಆರ್. ಆಸ್ಪತ್ರೆ, ಕೋಲಾರ |
| 3 | ತಾಲ್ಲುಕು ಆಸ್ಪತ್ರೆ, ಕುಣಿಗಲ್, ತುಮಕೂರು ಜಿಲ್ಲೆ | ಜಿಲ್ಲಾ ಆಸ್ಪತ್ರೆ, ಚಿಕ್ಕಬಳ್ಳಾಪುರ |
| 4 | ತಾಲ್ಲೂಕು ಆಸ್ಪತ್ರೆ, ಕೊರಟಗೆರೆ, ತುಮಕೂರು ಜಿಲ್ಲೆ | ಜಿಲ್ಲಾ ಆಸ್ಪತ್ರೆ, ತುಮಕೂರು |
| 5 | ತಾಲ್ಲೂಕು ಆಸ್ಪತ್ರೆ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ |
| 6 | ತಾಲ್ಲೂಕು ಆಸ್ಪತ್ರೆ, ಜಗಳೂರು, ದಾವಣಗೆರೆ ಜಿಲ್ಲೆ | ಜಿಲ್ಲಾ ಆಸ್ಪತ್ರೆ, ದಾವಣಗೆರೆ |
| 7 | ತಾಲ್ಲೂಕು ಆಸ್ಪತ್ರೆ, ಕೆ.ಆರ್. ನಗರ, ಮೈಸೂರು | ಜಿಲ್ಲಾ ಆಸ್ಪತ್ರೆ, ಮಡಿಕೇರಿ, ಕೊಡಗು |
| 8 | ತಾಲ್ಲೂಕು ಆಸ್ಪತ್ರೆ, ತರೀಕೆರೆ, ಚಿಕ್ಕಮಗಳೂರು ಜಿಲ್ಲೆ | ಜಿಲ್ಲಾ ಆಸ್ಪತ್ರೆ, ಉಡುಪಿ |
| 9 | ತಾಲ್ಲೂಕು ಆಸ್ಪತ್ರೆ, ಸಿಂಧಗಿ, ವಿಜಯಪುರ ಜಿಲ್ಲೆ | ಜಿಲ್ಲಾ ಆಸ್ಪತ್ರೆ, ಬಾಗಲಕೋಟೆ |
| 10 | ತಾಲ್ಲೂಕು ಆಸ್ಪತ್ರೆ, ಹಿರೇಕೆರೂರು, ಹಾವೇರಿ ಜಿಲ್ಲೆ | ಜಿಲ್ಲಾ ಆಸ್ಪತ್ರೆ, ಧಾರವಾಡ |
| 11 | ತಾಲ್ಲೂಕು ಆಸ್ಪತ್ರೆ, ಸೇಡಂ, ಕಲಬುರಗಿ ಜಿಲ್ಲೆ | ಜಿಲ್ಲಾ ಆಸ್ಪತ್ರೆ, ಯಾದಗಿರಿ |
| 12 | ತಾಲ್ಲೂಕು ಆಸ್ಪತ್ರೆ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ | ಜಿಲ್ಲಾ ಆಸ್ಪತ್ರೆ, ಬಳ್ಳಾರಿ |
| 13 | ತಾಲ್ಲೂಕು ಆಸ್ಪತ್ರೆ, ಮಾನ್ವಿ, ರಾಯಚೂರು ಜಿಲ್ಲೆ | ಜಿಲ್ಲಾ ಆಸ್ಪತ್ರೆ, ಕೊಪ್ಪಳ |

ಜಿಲ್ಲಾ ಆಸ್ಪತ್ರೆಗಳಲ್ಲಿನ 2 ದಂತ ಆರೋಗ್ಯಾಧಿಕಾರಿ ಹುದ್ದೆಗಳ ಪೈಕಿ ಒಂದು ಹುದ್ದೆಗೆ ಎಂಡಿಎಸ್ ಸ್ನಾತಕೋತ್ತರ ವ್ಯಾಸಂಗ ಪೂರೈಸಿರುವ ಹಿರಿಯ ದಂತ ಆರೋಗ್ಯಾಧಿಕಾರಿಯನ್ನು ಹಾಗೂ ಇನ್ನೊಂದು ಹುದ್ದೆಯಲ್ಲಿ ಬಿಡಿಎಸ್ ಪದವಿ ಹೊಂದಿದ ದಂತ ಆರೋಗ್ಯಾಧಿಕಾರಿಯನ್ನು ಜೇಷ್ಠತೆಯ ಆಧಾರದನ್ವಯ ಆಯಾ ಜಿಲ್ಲೆಯಲ್ಲಿರುವ/ಹತ್ತಿರವಿರುವ ಆಸ್ಪತ್ರೆಯಿಂದ ಕೌನ್ಸಿಲಿಂಗ್ ಮೂಲಕ ಸ್ಥಳಾಂತರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 1996, ದಿನಾಂಕ: 01.07.1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

**PR. 428**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ನರಸಿಂಹರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ:** ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ ಹಾಗೂ ಎಲ್ಲಾ ಜಿಲ್ಲೆಗಳ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರಿ ಅಭಿಯೋಜಕರನ್ನು The Mines and Minerals (Development and Regulation) Act, 1957 ಕಲಂ 30(ಸಿ) ಪ್ರಕಾರ ವಿಶೇಷ ಸರ್ಕಾರಿ ಅಭಿಯೋಜಕರೆಂದು ಪದನಾಮಗೊಳಿಸುವ (Designate) ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಅಧಿಸೂಚನೆ ಲಾ 18 ಎಲ್‌ಸಿಇ 2016, ದಿನಾಂಕ: 17.03.2016.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ–1/366/2015–16, ದಿನಾಂಕ: 28.03.2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿ The Mines and Minerals (Development and Regulation) Act, 1957 ಕಲಂ 30(ಬಿ) ಪ್ರಕಾರ ಎಲ್ಲಾ ಜಿಲ್ಲೆಗಳ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳನ್ನು ವಿಶೇಷ ನ್ಯಾಯಾಲಯಗಳೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿ The Mines and Minerals (Development and Regulation) Act, 1957 ಕಲಂ 30(ಸಿ) ಪ್ರಕಾರ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ ಹಾಗೂ ಎಲ್ಲಾ ಜಿಲ್ಲೆಗಳ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಇರುವ ಸರ್ಕಾರಿ ಅಭಿಯೋಜಕರನ್ನು The Mines and Minerals (Development and Regulation) ಪ್ರಕರಣಗಳನ್ನು ನಡೆಸಲು ವಿಶೇಷ ಸರ್ಕಾರಿ ಅಭಿಯೋಜನಕರೆಂದು ಪದನಾಮಗೊಳಿಸುವ (Designate) ಆದೇಶವನ್ನು ಹೊರಡಿಸಬೇಕೆಂದು ಅಭಿಯೋಗ ನಿರ್ದೇಶಕರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರದ ಮಂಜೂರಾತಿ ನೀಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 118 ಪಿಪಿಇ 2016, ಬೆಂಗಳೂರು, ದಿನಾಂಕ: 30ನೇ ಮೇ 2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಕಾರಣಗಳ ಹಿನ್ನೆಲೆಯಲ್ಲಿ The Mines and Minerals (Development and Regulation) Act, 1957 ಕಲಂ 30(ಸಿ) ಪ್ರಕಾರ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ ಹಾಗೂ ಎಲ್ಲಾ ಜಿಲ್ಲೆಗಳ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಇರುವ ಸರ್ಕಾರಿ ಅಭಿಯೋಜಕರನ್ನು The Mines and Minerals (Development and Regulation) ಪ್ರಕರಣಗಳನ್ನು ನಡೆಸಲು ವಿಶೇಷ ಸರ್ಕಾರಿ ಅಭಿಯೋಜನಕರೆಂದು ಪದನಾಮಗೊಳಿಸುವ (Designate) ಆದೇಶಿಸಿದೆ.

**PR. 429**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ. ಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಪೊಲೀಸು ಸೇವೆಗಳು–ಬಿ)

## ENERGY SECRETARIAT

**Sub:** Withdrawal of direction issued under Section 11 of Electricity Act, 2003 to the Generators in the State for Supply of energy to the State.

**Read:** Government Order No. EN 11 PPT, 2015, dated 16th September 2015.

.**PREAMBLE :**

1. State Government has issued directions to all the Generators in the State of Karnataka that they shall operate and maintain their generating stations to the maximum exportable capacity and shall supply all exportable electricity generated to the State Grid for utilization within the State in public interest with immediate effect vide Government Order read above.
2. As specified in the order read above, the power under Section 11 had been resorted to in view of the extraordinary situation that had arisen because of various factors which lead to an apprehension that there is a serious threat to the Grid security and public interest.
3. The State Government has been monitoring and reviewing the situation continuously and it is seen that the extraordinary situation which arose resulting in the Government order read above, has ceased to exist in view of various development.
4. The daily State consumption is reduced to an extent of about 20 MU to 50 MU from 06.05.2016 onwards. Correspondingly the peak demand which was around 9000 MW to 9300 MW during the first week of May 2016, is currently reduced to 7200 MW to 8600 MW.

   Further from past one week (from 18.05.2016 onwards) infirm wind energy during morning and evening peak hours has raised considerably injected power is in the range of 650 MW to 1000 MW and average wind injection per day is ranging from 19 MU to 26 MUs. State Load Despatch Centre (SLDC) has been able to maintain the grid discipline as per IEGC Regulations by its actions.
5. Under the circumstances explained above, the extraordinary situation warranting exercise of power under Section 11 of the Electricity Act 2003 has since ceased to exit at present due to the changed power situation in the State. Hence this order:

**Government Order No. EN 11 PPT 2015, Bengaluru, Dated: 30th May 2016**.

In the Circumstances explained in the Preamble, the directions issued vide Government Order No. EN 11 PPT 2015, dated 16th September 2015 in exercise of the powers conferred under section-11 of Electricity Act, 2003 in the public interest that all the Generators in the State of Karnataka shall operate and maintain their generating stations to maximum exportable capacity and shall supply all exportable electricity generated to the State Grid for utilization within the state has been withdrawn with effect from 01.06.2016.

**PR. 430**
**SC. 50**

By Order and in the name of the Governor of Karnataka
**A.A. CHAPPARBAND,**
Under Secretary to Government,
Energy Department.

## ಇಂಧನ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 145 ಪಿಎಸ್‌ಆರ್ 2004, ದಿನಾಂಕ : 15–03–2005.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 55 ಪಿಎಸ್‌ಆರ್ 2008, ದಿನಾಂಕ : 04–09–2008.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ" ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ (ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು) ಮುಂದಿನ ಆದೇಶದವರೆಗೆ ದಿನಾಂಕ : 01–08–2008 ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2016ರ ದರ ಆದೇಶದಲ್ಲಿ 2016–17ನೇ ಸಾಲಿಗೆ ₹. 8,837.81 ಕೋಟಿಗಳ ಸಹಾಯಧನವನ್ನು ನಿಗಧಿಪಡಿಸಿದೆ.
4. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2016–17ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ–190ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ₹. 7,199–00 ಕೋಟಿಗಳನ್ನು ಒದಗಿಸಲಾಗಿದೆ.
5. 2016–17ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ಸಹಾಯಧನ ₹. 7,199.00 ಕೋಟಿಗಳಲ್ಲಿ ಪ್ರತಿ ಮಾಹೆಯಾನ ₹. 420.00 ಕೋಟಿಗಳನ್ನು ನಗದಾಗಿ ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಎಫ್‌ಡಿ 170 ವೆಚ್ಚ–1/16, ದಿನಾಂಕ: 03–05–2016ರಲ್ಲಿ ಸಹಮತಿ ನೀಡಿದೆ.
6. ಏಪ್ರಿಲ್–2016ರ ಮಾಹೆಗೆ ಸಹಾಯಧನ ₹. 420.00 ಕೋಟಿಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 25 ಪಿಎಸ್‌ಆರ್ 2016, ಬೆಂಗಳೂರು, ದಿನಾಂಕ : 07–05–2016.**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2016–17ನೇ ಸಾಲಿನ ಏಪ್ರಿಲ್–2016ರ ಮಾಹೆಗೆ ₹. 420.00 ಕೋಟಿಗಳ (ರೂ. ನಾನೂರ ಇಪ್ಪತ್ತು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106" (ಸಹಾಯಧನ) (ಯೋಜನೇತರ) ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**₹. ಕೋಟಿಗಳಲ್ಲಿ**

| **ವಿದ್ಯುತ್ ಸರಬರಾಜು ಕಂಪನಿಗಳು** | **10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ** | **ಭಾಗ್ಯ ಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳಿಗೆ** | **2016–17ರ ಏಪ್ರಿಲ್–2016 ಮಾಹೆಗೆ ಬಿಡುಗಡೆ** |
|---|---|---|---|
| ಬೆವಿಕಂ | 55.50 | 2.50 | 58.00 |
| ಮವಿಕಂ | 24.00 | 1.00 | 25.00 |
| ಹುವಿಕಂ | 168.50 | 4.50 | 173.00 |
| ಕವಿಕಂ | 83.00 | 6.00 | 89.00 |
| ಚಾವಿಸನಿನಿ | 68.00 | 2.00 | 70.00 |
| ಹು.ಗ್ರಾ.ಸ.ಸಂ | 5.00 | 0.00 | 5.00 |
| **ಒಟ್ಟು** | **404.00** | **16.00** | **420.00** |

2. ಮೇಲಿನ ಕಂಡಿಕೆ 1ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ ಬಾಬ್ತನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

**₹. ಕೋಟಿಗಳಲ್ಲಿ**

| **ವಿದ್ಯುತ್ ಸರಬರಾಜು ಕಂಪನಿಗಳು** | **ಏಪ್ರಿಲ್–2016ರ ಮಾಹೆಗೆ ಸಹಾಯಧನ ಬಿಡುಗಡೆ** | | |
|---|---|---|---|
| | **ವಿಸಕಂಗಳ ಪರವಾಗಿ ಕವಿನಿನಿಗೆ** | **ವಿಸಕಂ ಗಳಿಗೆ** | **ಒಟ್ಟು** |
| ಬೆವಿಕಂ | 58.00 | 0.00 | 58.00 |
| ಮವಿಕಂ | 25.00 | 0.00 | 25.00 |
| ಹುವಿಕಂ | 72.00 | 101.00 | 173.00 |
| ಕವಿಕಂ | 69.00 | 20.00 | 89.00 |
| ಚಾವಿಸನಿನಿ | 54.00 | 16.00 | 70.00 |
| ಹು.ಗ್ರಾ.ಸ.ಸಂ | 0.00 | 5.00 | 5.00 |
| **ಒಟ್ಟು** | **278.00** | **142.00** | **420.00** |

3. ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ₹.5.00 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.

4. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ₹. 278.00 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ₹. 106.00 ಕೋಟಿಗಳನ್ನು, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ₹. 20.00 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ₹. 16.00 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

6. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

7. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

8. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಸಹಾಯಧನ ಬೇಡಿಕೆಗಳನ್ನು ವಿಸಕಂಗಳಿಗೆ ಬಿಡುಗಡೆ ಮಾಡಿರುವ ಮೊತ್ತದ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

9. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 170 ವೆಚ್ಚ–1/16, ದಿನಾಂಕ : 03–05–2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

**P.R. 452**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ENERGY SECRETARIAT

**Sub :** Relaxation of Article 17 (c) (4) of KFC, 1957 for release of equity support to power utilities for first two quarters of Financial Year 2016-17.

**Read :** The Article 17(c)(4) of KFC, 1957.

**PREAMBLE:**

1. In the budget for the 2016-17 ₹. 861.29 crs has been provided towards capital outlay on power projects. This amount has to be released as investment in power utilities during the year 2016-17.
2. As per the Article 17 (c) (4) of KFC, 1957 the Accountant General is required to issue the authority of intimation for payment by State Huzur Treasury on account of Government investments in Companies.
3. The Finance Department has concurred for relaxing condition of Article 17(c)(4) of KFC, 1957 vide note No. FD 175 Exp-1/16 dated : 03-05-2016. Hence, this order.

**GOVERNMENT ORDER NO. EN 27 PSR 2016/P1, BENGALURU, DATED : 16th MAY, 2016.**

- Under the circumstances explained above, Government is pleased to relax the conditions of issuing of Authority of Intimation by Accountant General for payment by Treasuries on account of Government's Investments (Equity) required under Article 17 (c) (4) of Karnataka Financial Code, 1957 for release of 50% of the Budgetary Provision of Rs. 861.29 crores (total BE including SDP, SCSP, TSP & Unspent SCP & TSP) i.e. ₹. 430.65 crores of equity support to power utilities for the period from April 2016 to September 2016 of Financial Year 2016-17.
- This order is issued with the concurrence of the Finance Department vide Note NO : FD 175 Exp-1/16 dated : 03-05-2016.

**P.R. 453**

By Order and in the name of the Governor of Karnataka,
**A.A. Chapparband,**
Under Secretary to Government,
Energy Department.

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1) ಸರ್ಕಾರಿ ಅಧಿಸೂಚನೆ ಸಂಖ್ಯೆ : ಡಿಇ 14 ಪಿಎಸ್‌ಆರ್ 2002, ದಿನಾಂಕ : 31–05–2002.
2) ಸರ್ಕಾರಿ ಆದೇಶ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ : 19–12–2002.
3) ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ : 02–04–2016.
4) ಸರ್ಕಾರಿ ಆದೇಶ ಸಂಖ್ಯೆ : ಇಎನ್ 26 ಪಿಎಸ್‌ಆರ್ 2016, ದಿನಾಂಕ : 26–04–2016.
5) ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ರವರ ಪತ್ರ ಸಂಖ್ಯೆ : ಕೆಇಪಿಜಿಟಿ/ಕೆಸಿಒ123/ಪಿ14/2016–17/251–255, ದಿನಾಂಕ : 07–05–2016.

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.
2. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2016–17ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106" (ಯೋಜನೇತರ) ಲೆಕ್ಕಶೀರ್ಷಿಕೆಯಡಿ ₹. 550.00 ಕೋಟಿಗಳನ್ನು ಒದಗಿಸಲಾಗಿರುತ್ತದೆ. ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈವರೆವಿಗೆ ₹. 45.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.
4. ಮೇಲೆ (5)ರಲ್ಲಿ ಓದಲಾದ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ರವರ ಪತ್ರದಲ್ಲಿ ಮೇ–2016ರ ಮಾಹೆಗೆ ಪಿಂಚಣಿ ಮತ್ತು ಉಪದಾನ ವಂತಿಕೆ ₹. 77.00 ಕೋಟಿಗಳನ್ನು ಬಿಡುಗಡೆ ಮಾಡಲು ಕೋರಿದ್ದಾರೆ.
5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2016–17ನೇ ಸಾಲಿನ ಮೇ 2016ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ₹. 46.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 26 ಪಿಎಸ್‌ಆರ್ 2016, ಬೆಂಗಳೂರು, ದಿನಾಂಕ : 18–05–2016.**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2016–17ನೇ ಸಾಲಿನ ಮೇ–2016ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ₹. 46.00 ಕೋಟಿ (ರೂ. ನಲವತ್ತಾರು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : FD 3 TFP 2016, ದಿನಾಂಕ : 02–04–2016ರಲ್ಲಿ ಅಪರ ಮುಖ್ಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

P.R. 454

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** 2016–17ನೇ ಸಾಲಿನಲ್ಲಿ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ತ್ರಿಪಕ್ಷೀಯ ಹೊಂದಾಣಿಕೆಯ (Tripartite Adjustment) ಮೂಲಕ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ಇಎನ್ 145 ಪಿಎಸ್‌ಆರ್ 2004, ದಿನಾಂಕ : 15–03–2005.
2) ಸರ್ಕಾರಿ ಆದೇಶ ಸಂಖ್ಯೆ : ಇಎನ್ 55 ಪಿಎಸ್‌ಆರ್ 2008, ದಿನಾಂಕ : 04–09–2008.
3) ಸರ್ಕಾರಿ ಆದೇಶ ಸಂಖ್ಯೆ : ಇಎನ್ 25 ಪಿಎಸ್‌ಆರ್ 2016, ದಿನಾಂಕ : 07–05–2016.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ" ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ (ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು) ಮುಂದಿನ ಆದೇಶದವರೆಗೆ ದಿನಾಂಕ : 01–08–2008 ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.

3. ಕರ್ನಾಟಕ ವಿದ್ಯುಚ್ಛಕ್ತಿ ವಲಯದ ಕಂಪನಿಗಳಾದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆಯನ್ನು ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನದ ಬಾಬ್ತಿಗೆ ವರ್ಷಾವಾರು ಸರಿಹೊಂದಿಸುವ ನೀತಿ ಮೊದಲಿನಿಂದಲೂ ವಾಡಿಕೆಯಲ್ಲಿದೆ.

4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2016ರ ದರ ಆದೇಶದಲ್ಲಿ 2016–17ನೇ ಸಾಲಿಗೆ ₹. 8,837.81 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನವನ್ನಾಗಿ ಬಿಡುಗಡೆ ಮಾಡಲು ನಿಗಧಿಪಡಿಸಿದೆ.

5. ಆರ್ಥಿಕ ವರ್ಷ 2016–17ನೇ ಸಾಲಿನ ಆಯವ್ಯಯದಲ್ಲಿ ₹. 7,199.00 ಕೋಟಿಗಳನ್ನು ಒದಗಿಸಿದೆ. ದಿನಾಂಕ : 07–05–2016ರವರೆಗೆ ಮೇಲಿನ ಕ್ರಮಾಂಕ (3)ರಲ್ಲಿ ಓದಲಾದ ಆದೇಶದಲ್ಲಿ ₹. 420.00 ಕೋಟಿಗಳನ್ನು ಈಗಾಗಲೇ ವಿದ್ಯುತ್ ಸರಬರಾಜು ಕಂಪನಿಗಳಿಗೆ ನಗದು ರೂಪದಲ್ಲಿ 2016–17ನೇ ಸಾಲಿಗೆ ಸಹಾಯಧನವನ್ನು ಬಿಡುಗಡೆ ಮಾಡಲಾಗಿದೆ.

6. 2016–17ನೇ ಸಾಲಿನ ಏಪ್ರಿಲ್ 2016ರ ಮಾಹೆಗೆ ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸರ್ಕಾರಕ್ಕೆ ಪಾವತಿಸಬೇಕಾದ ವಿದ್ಯುತ್ ತೆರಿಗೆ ಹಾಗೂ ರಾಜಧನವನ್ನು ಈ ಕೆಳಗೆ ವಿವರಿಸಿರುವಂತೆ ತ್ರಿಪಕ್ಷೀಯ ಹೊಂದಾಣಿಕೆ (Tripartite Adjustment) ಮೂಲಕ ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಸರಿಹೊಂದಿಸಲು ಪ್ರಸ್ತಾಪಿಸಿದೆ.

**₹. ಕೋಟಿಗಳಲ್ಲಿ**

| ಕ್ರ.ಸಂ. | ವಿಸಕಂ | ಏಪ್ರಿಲ್–2016 |
|---|---|---|
| 1 | ಬೆವಿಕಂ | 55.83 |
| 2 | ಮವಿಕಂ | 10.50 |
| 3 | ಹುವಿಕಂ | 11.94 |
| 4 | ಕವಿಕಂ | 8.47 |
| 5 | ಚಾವಿಸನಿನಿ | 9.98 |
| 6 | ಕವಿನಿನಿ | 0.59 |
| | **ಒಟ್ಟು** | **97.31** |
| 7 | ಕವಿನಿನಿ (ರಾಜಧನ) | **2.69** |
| | **ಒಟ್ಟು** | **100.00** |

(ಬೆವಿಕಂ ಹೊಂದಾಣಿಕೆಯ ₹. 55.83 ಕೋಟಿಗಳಲ್ಲಿ 2015–16ನೇ ಸಾಲಿನ ಬಾಕಿ ತೆರಿಗೆ ₹. 19.46 ಕೋಟಿಗಳು ಒಳಗೊಂಡಿದೆ)

7. ಮೇಲೆ ವಿವರಿಸಿರುವಂತೆ, ಏಪ್ರಿಲ್–2016ರ ಮಾಹೆಯಲ್ಲಿ ವಸೂಲಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ಮೊತ್ತದ ಬಾಬ್ತು ₹. 100.00 ಕೋಟಿಗಳನ್ನು ತ್ರಿಪಕ್ಷೀಯ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ. ಆದ್ದರಿಂದ, ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 25 ಪಿಎಸ್‌ಆರ್ 2016/ಪಿ3, ಬೆಂಗಳೂರು, ದಿನಾಂಕ : 19–05–2016.**

1. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಬಾಬ್ತು **₹. 96.72 ಕೋಟಿಗಳನ್ನು (ತೊಂಭತ್ತಾರು ಕೋಟಿ ಎಪ್ಪತ್ತೆರಡು ಲಕ್ಷ ರೂ.ಗಳು ಮಾತ್ರ)** ವಿದ್ಯುತ್ ಸರಬರಾಜು ಕಂಪನಿಗಳು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಸರಿಹೊಂದಿಸಿ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.

**A: ESCOM's PORTION** **(₹. in Crs)**

| DEBIT | | CREDIT | |
|---|---|---|---|
| **Head of Account** | **Amount** | **Head of Account** | **Amount** |
| **Subsidy to ESCOMs** | | **Electricity Tax collection** | |
| 2801-80-101-1-04-106 | | 0043–00–101–0–01 | |
| BESCOM | 55.83 | BESCOM | 55.83 |
| MESCOM | 10.50 | MESCOM | 10.50 |
| HESCOM | 11.94 | HESCOM | 11.94 |
| KESCOM | 8.47 | KESCOM | 8.47 |
| CESC | 9.98 | CESC | 9.98 |
| **Total** | **96.72** | **Total** | **96.72** |

ಬೆವಿಕಂ ಹೊಂದಾಣಿಕೆಯ ಮೊತ್ತ ₹. 55.83 ಕೋಟಿಗಳಲ್ಲಿ 2015–16ನೇ ಸಾಲಿನ ಬಾಕಿ ತೆರಿಗೆ ₹. 19.46 ಕೋಟಿಗಳು ಒಳಗೊಂಡಿದೆ.

2. 2016–17ನೇ ಸಾಲಿನ ಏಪ್ರಿಲ್ 2016ರ ಮಾಹೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ₹. 3.28 ಕೋಟಿಗಳನ್ನು ಸಹ ಸರ್ಕಾರವು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿರುವಂತೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ. ಕವಿನಿನಿ ಮತ್ತು ಕವಿಕಂ ಸಂಸ್ಥೆಗಳು ವಿದ್ಯುತ್ ಖರೀದಿ ಅಸಲಿಗೆ ಲೆಕ್ಕೀಕರಿಸಲು ಆದೇಶಿಸಿದೆ.

**B: KPCL PORTION** **(₹. in Crs)**

| DEBIT | | CREDIT | |
|---|---|---|---|
| **Head of Account** | **Total Amount** | **Head of Account** | **Total Amount** |
| **Subsidy to ESCOMs** | | **Royalty from KPCL** | |
| 2801-80-101-1-04-106 | | 0801–01–201–0–01 | 2.69 |
| KESCOM | 3.28 | | |
| | | **Electricity Tax** | |
| (KPCL to adjust this receipt against power purchase cost of KESCOM) | | 0043-00-101-0-01 | 0.59 |
| **Total – (B)** | **3.28** | **Total – (B)** | **3.28** |

3. ಲೆಕ್ಕ ಮಹಾಪರಿಶೋಧಕರು ಈ ಹೊಂದಾಣಿಕೆಗಳನ್ನು ಸಂಪೂರ್ಣವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಕೋರಿದೆ. ಈ ಆದೇಶದ ಪ್ರಕಾರ ಯಾವುದೇ ನಗದು ಬಿಡುಗಡೆ ಇರುವುದಿಲ್ಲ.

4. ಈ ಸರ್ಕಾರಿ ಆದೇಶದಲ್ಲಿ ಆದೇಶಿಸಿರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಮುಖ್ಯ ವಿದ್ಯುತ್ ಪರಿವೀಕ್ಷಕರು ಆ ಸಂಸ್ಥೆಗಳ ದಸ್ತಾವೇಜುಗಳಲ್ಲಿ ಸಮರ್ಪಕ ಹೊಂದಾಣಿಕೆ ಮಾಡಿಕೊಳ್ಳಲು ಆದೇಶಿಸಿದೆ.

5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ತೆರಿಗೆ ಮತ್ತು ರಾಜಸ್ವ ₹. 3.28 ಕೋಟಿಗಳನ್ನು ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನವಾಗಿ ಸರಿಹೊಂದಿಸಲು ಸೂಚಿಸಿದೆ. ಈ ಮೊತ್ತವನ್ನು ವಿದ್ಯುತ್ ಖರೀದಿ ಅಸಲು ವೆಚ್ಚಕ್ಕೆ ಲೆಕ್ಕೀಕರಿಸುವುದು.

6. ಈ ಆದೇಶದಲ್ಲಿ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಿರುವ ಸಹಾಯಧನವನ್ನು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಸಹಾಯಧನದ ಬಾಬ್ತಿಗೆ ಬಿಡುಗಡೆ ಮಾಡಿದೆ ಎಂದು ಪರಿಗಣಿಸುವುದು.

7. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 170 ವೆಚ್ಚ–1/16, ದಿನಾಂಕ : 03–05–2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

**P.R. 455**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಸಾರ್ವಜನಿಕ ಉದ್ದಿಮೆಗಳ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಮುಖ್ಯ ಜಾಗೃತ ಅಧಿಕಾರಿ (Chief Vigilance Officer)ಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 14 ಸೇಲೋಯು 2016, ದಿನಾಂಕ : 14–03–2016.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 88 ಸೇಲೋಯು 2016, ದಿನಾಂಕ : 22–06–2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿ : 14–03–2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿ : 22–06–2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ : 14–03–2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿನಾಂಕ: 22–06–2016ರ ಆದೇಶದ ಆದೇಶ ಭಾಗದ ಕಂಡಿಕೆ 1(1)ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖೆಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳ ನಂತರದ (officer next in seniority) ಅಧಿಕಾರಿಯನ್ನು ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ ಪರಿಶೀಲಿಸಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ :. ಸಾಉಇ 85 ಎಂಇಎ 2016, ಬೆಂಗಳೂರು, ದಿನಾಂಕ : 02–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಗೆ ಸಂಬಂಧಿಸಿದಂತೆ, ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ) ಇವರನ್ನು ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

P.R. 556

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜೆ. ಭಾಗ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ)
ಸಾರ್ವಜನಿಕ ಉದ್ದಿಮೆಗಳ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಯನಗರದಲ್ಲಿರುವ ಶ್ರೀ ವಿನಾಯಕ ದೇವಾಲಯವನ್ನು ಘೋಷಿತ ಸಂಸ್ಥೆಯೆಂದು ಘೋಷಿಸಿ ಸರ್ಕಾರದ ವಶಕ್ಕೆ ಪಡೆಯುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ : ಕಂಇ 87 ಮುಆಬಿ 2013, ದಿನಾಂಕ : 02–01–2014.
2) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ : ಎಡಿಎಂ 8 ಸಿಆರ್ 218/2015–16, ದಿನಾಂಕ : 01–07–2016.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬೆಂಗಳೂರು ನಗರ ಜಯನಗರ, ನಾಲ್ಕನೇ ಬಡಾವಣೆಯಲ್ಲಿರುವ ಶ್ರೀ ವಿನಾಯಕ ದೇವಾಲಯದಲ್ಲಿ ಸಾರ್ವಜನಿಕ ಹಣ ಮತ್ತು ಆಸ್ತಿ ದುರುಪಯೋಗ/ಅವ್ಯವಹಾರದ ಕುರಿತು ಕಾಯ್ದೆಯ ಕಲಂ 43(6) ರಡಿಯಲ್ಲಿ ನಡೆದ ವಿಚಾರಣಾ ವರದಿಯನ್ನಾಧರಿಸಿ ಬೆಂಗಳೂರು ನಗರ ಜಯನಗರ, ನಾಲ್ಕನೇ ಬಡಾವಣೆಯಲ್ಲಿರುವ ಶ್ರೀ ವಿನಾಯಕ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಅಧಿನಿಯಮ 1997ರ ಅಧಿನಿಯಮ 42 ಮತ್ತು 43 ರನ್ವಯ ಘೋಷಿತ ಸಂಸ್ಥೆಯೆಂದು ಘೋಷಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ಪ್ರಶ್ನಿಸಿ, ದೇವಾಲಯದ ಸಮಿತಿಯವರು ಮಾನ್ಯ ಉಚ್ಚನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ : 1260/2014ನ್ನು ದಾಖಲಿಸಿರುತ್ತಾರೆ. ಸದರಿ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ : 18–11–2015ರಂದು ನೀಡಿರುವ ತೀರ್ಪಿನಲ್ಲಿ ಪ್ರಸ್ತಾಪಿತ ದೇವಸ್ಥಾನವನ್ನು ಸರ್ಕಾರದ ವಶಕ್ಕೆ ಪಡೆಯುವ ಮುನ್ನ 1 ರಿಂದ 4 ವರೆಗಿನ ಪ್ರತಿವಾದಿಗಳು ಕಾಯ್ದೆಯ ಸೆಕ್ಷನ್ 43ರ ಉಪಬಂಧವನ್ನು ಪಾಲಿಸಿರುವುದಿಲ್ಲ. ಆದುದರಿಂದ ಸಂಸ್ಥೆಯ ವಿರುದ್ಧ ಕ್ರಮ ಕೈಗೊಳ್ಳುವ ಮುನ್ನ ಕಾಯ್ದೆಯ ಸೆಕ್ಷನ್ 43(1)ರನ್ವಯ ಪ್ರಾರಂಭಿಕ ನೋಟೀಸ್ ನೀಡಿ ಅವರಿಂದ ಆಕ್ಷೇಪಣೆಗಳನ್ನು ಪಡೆದು ಹೊಸದಾಗಿ ವಿಚಾರಣೆ ನಡೆಸುವಂತೆ ನಿರ್ದೇಶನ ನೀಡಿರುತ್ತದೆ. ಅಲ್ಲಿಯವರೆಗೆ ದೇವಾಲಯದ ಆಡಳಿತವನ್ನು ಸರ್ಕಾರದ ಸುಪರ್ದಿಯಲ್ಲಿಯೇ ಮುಂದುವರೆಸಲಾಗಿರುತ್ತದೆ.

ಮಾನ್ಯ ಉಚ್ಚನ್ಯಾಯಾಲಯದ ನಿರ್ದೇಶನದಂತೆ ಸೆಕ್ಷನ್ 43(1) ರಡಿಯಲ್ಲಿ ಕಾರಣ ಕೇಳಿ ನೋಟೀಸ್ ಜಾರಿ ಮಾಡಿ ಪ್ರಸ್ತಾಪಿತ ದೇವಾಲಯವನ್ನು ಸರ್ಕಾರದ ವಶಕ್ಕೆ ಏಕೆ ಪಡೆಯಬಾರದು ? ಎಂಬ ಬಗ್ಗೆ ನೋಟೀಸ್ ತಲುಪಿದ ಒಂದು ತಿಂಗಳೊಳಗಾಗಿ ಅಗತ್ಯ ದಾಖಲೆಗಳೊಂದಿಗೆ ಲಿಖಿತ ಸಮಜಾಯಿಷಿಯನ್ನು ನೀಡಲು ತಿಳಿಸಲಾಗಿರುತ್ತದೆ. ಸದರಿ ನೋಟೀಸ್‌ಗೆ ಅರ್ಜಿದಾರರು ದಿನಾಂಕ : 22–02–2016ರಂದು ನೀಡಿದ ಲಿಖಿತ ಆಕ್ಷೇಪಣೆಯಲ್ಲಿ ಶ್ರೀ ವಿನಾಯಕ ಸೇವಾ ಸಮಿತಿಯು 1976 ರಿಂದ ದೇವಾಲಯದ ಆಡಳಿತ ಹಾಗೂ ಲೆಕ್ಕ ಪತ್ರಗಳನ್ನು ಸಮರ್ಪಕವಾಗಿ ಪಾರದರ್ಶಕತೆಯಿಂದ ನಡೆಸಿದ್ದು, ಲೆಕ್ಕ ಪತ್ರಗಳನ್ನು ಕಾಲಕಾಲಕ್ಕೆ ಲೆಕ್ಕ ಪರಿಶೋಧಕರಿಂದ ಪರಿಶೀಲನೆ ನಡೆಸಿ, ವಾರ್ಷಿಕ ಮಹಾಸಭೆಯಲ್ಲಿ ಅನುಮೋದಿಸಲಾಗಿರುತ್ತದೆ. ಜನವರಿ–2014ರಲ್ಲಿ ಸಮಿತಿಯ ದಾಖಲಾತಿ ಲೆಕ್ಕ ಪತ್ರಗಳನ್ನು ಸರ್ಕಾರದಿಂದ ನಿಯೋಜಿಸಿದ ಅಧಿಕಾರಿಗೆ ಹಸ್ತಾಂತರಿಸಲಾಗಿದ್ದು, ನೋಟೀಸ್‌ನಲ್ಲಿ ಯಾವುದೇ ದೂರುಗಳು ಇಲ್ಲದೇ ಇರುವ ಕಾರಣ ಶ್ರೀ ವಿನಾಯಕ ದೇವಾಲಯವನ್ನು ಸರ್ಕಾರದ ವಶಕ್ಕೆ ಪಡೆಯಬಾರದೆಂದು ಕೋರಿರುತ್ತಾರೆ. ಶ್ರೀ ವಿನಾಯಕ ಸೇವಾ ಸಮಿತಿಯವರು ಸಲ್ಲಿಸಿರುವ ಲಿಖಿತ ಆಕ್ಷೇಪಣೆಗಳನ್ನು ಅಪರ ಜಿಲ್ಲಾಧಿಕಾರಿ ಮತ್ತು ಉಪ ಆಯುಕ್ತರು ಇವರಿಗೆ ದಿನಾಂಕ : 30–03–2016ರಂದು ಕಳುಹಿಸಿ ಸೆಕ್ಷನ್ 43(6) ರಡಿಯಲ್ಲಿ ವಿಚಾರಣೆ ನಡೆಸಿ ವಿವರವಾದ ವರದಿ ಸಲ್ಲಿಸುವಂತೆ ನಿರ್ದೇಶನ ನೀಡಲಾಗಿರುತ್ತದೆ.

ಅದರಂತೆ ಅಪರ ಜಿಲ್ಲಾಧಿಕಾರಿ ಮತ್ತು ಉಪ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಶ್ರೀ ವಿನಾಯಕ ದೇವಾಲಯದ ಸೇವಾ ಸಮಿತಿಯ ಅಧ್ಯಕ್ಷರು ಹಾಗೂ ಕಾರ್ಯದರ್ಶಿಯವರಿಗೆ ವಿಚಾರಣೆಗೆ ಹಾಜರಾಗುವಂತೆ ದಿನಾಂಕ : 04–04–2016, 12–04–2016ರಂದು ನೋಟೀಸ್‌ಗಳನ್ನು ಜಾರಿ ಮಾಡಲಾಗಿದ್ದು, ಸದರಿಯವರು ವಿಚಾರಣೆಯಲ್ಲಿ ಹಾಜರಾಗಿರುವುದಿಲ್ಲ. ಆದರೆ, ಅಂಚೆ ಮೂಲಕ ದಿನಾಂಕ : 15–04–2016 ರಂದು ವಿಚಾರಣಾಧಿಕಾರಿಯವರಿಗೆ ಸಲ್ಲಿಸಿರುವ ಲಿಖಿತ ಉತ್ತರದಲ್ಲಿ ರಿಟ್ ಅರ್ಜಿ ಸಂಖ್ಯೆ : 1260/2014ರ ತೀರ್ಪಿನ ವಿರುದ್ಧ ವಿಭಾಗೀಯ ಪೀಠದಲ್ಲಿ ರಿಟ್ ಅಪೀಲು ಸಂಖ್ಯೆ : 37/2016ನ್ನು ದಾಖಲಿಸಿದ್ದು, ಸದರಿ ರಿಟ್ ಅಪೀಲು ಇತ್ಯರ್ಥವಾಗುವವರೆಗೆ ಪ್ರಕರಣದ ವಿಚಾರಣೆಯನ್ನು ಸ್ಥಗಿತಗೊಳಿಸಲು ಕೋರಿರುತ್ತಾರೆ. ಆದರೆ, ಅರ್ಜಿದಾರರು ದಾಖಲಿಸಿರುವ ರಿಟ್ ಅಪೀಲು ಸಂಖ್ಯೆ : 37/2016ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಯಾವುದೇ ತಡೆಯಾಜ್ಞೆಯನ್ನಾಗಲೀ ಅಥವಾ ಯಥಾಸ್ಥಿತಿಯನ್ನು ಕಾಯ್ದುಕೊಳ್ಳಲು ಮಧ್ಯಂತರ ಆದೇಶವನ್ನಾಗಲೀ ನೀಡಿರುವುದಿಲ್ಲ. ಇದಲ್ಲದೆ ಅರ್ಜಿದಾರರು ವಿಚಾರಣೆಯಲ್ಲಿ ಹಾಜರಾಗಿ ಯಾವುದೇ ಲಿಖಿತ ಆಕ್ಷೇಪಣೆಗಳನ್ನಾಗಲೀ, ಪೂರಕ ದಾಖಲೆಗಳನ್ನಾಗಲಿ ಹಾಜರುಪಡಿಸಿರುವುದಿಲ್ಲ.

ಆದಾಗ್ಯೂ ಕಡತದಲ್ಲಿ ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸಿ ಅಪರ ಜಿಲ್ಲಾಧಿಕಾರಿಯವರು ಈ ಕೆಳಕಂಡ ಅಭಿಪ್ರಾಯವನ್ನು ಸಲ್ಲಿಸಿರುತ್ತಾರೆ.

- ಬೆಂಗಳೂರು ಜಯನಗರ 4ನೇ ಬಡಾವಣೆಯಲ್ಲಿರುವ ಶ್ರೀ ವಿನಾಯಕ ದೇವಾಲಯವು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸಿ.ಎ.ನಿವೇಶನದ ಸರ್ಕಾರದ ಜಾಗದಲ್ಲಿ ಸಾರ್ವಜನಿಕ ಭಕ್ತಾಧಿಗಳಿಂದ ದೇಣಿಗೆ ಸಂಗ್ರಹಿಸಿ ನಿರ್ಮಿಸಲ್ಪಟ್ಟಿರುವಂತಹ ದೇವಸ್ಥಾನವಾಗಿರುತ್ತದೆ. ನಿವೇಶನ ಖರೀದಿಸಲು ಅಥವಾ ದೇವಸ್ಥಾನ ನಿರ್ಮಾಣ ಮಾಡಲು ಸಮಿತಿಯವರು ಯಾವುದೇ ಮೂಲಧನವನ್ನು ಭರಿಸಿರುವುದಿಲ್ಲ ಹಾಗೂ ಇದಕ್ಕಾಗಿ ಸಂಗ್ರಹಿಸಿರುವ ಕೋಟ್ಯಾಂತರ ರೂಪಾಯಿ ಹಣದ ಬಗ್ಗೆ ಲೆಕ್ಕಪತ್ರಗಳನ್ನು ನಿರ್ವಹಿಸಿರುವುದಿಲ್ಲ. ಮುಂದುವರೆದು, 1976 ರಿಂದ ದೇವಾಲಯಕ್ಕೆ ಬಂದ ಆದಾಯ ಮತ್ತು ಖರ್ಚುಗಳ ಬಗ್ಗೆಯೂ ಸಹ ಲೆಕ್ಕಪತ್ರಗಳನ್ನು ನಿರ್ವಹಿಸದೇ ಅಕ್ರಮವೆಸಗಿರುತ್ತಾರೆ.
- ಈ ದೇವಾಲಯದಲ್ಲಿ ಒಟ್ಟು ₹. 3.85 ಕೋಟಿಗಳ ಮೌಲ್ಯದ 15607.76 ಗ್ರಾಂ ಚಿನ್ನ ಮತ್ತು ₹. 53.20 ಲಕ್ಷ ರೂಪಾಯಿಗಳ ಮೌಲ್ಯದ 140.433 ಕೆ.ಜಿ ಬೆಳ್ಳಿ ಇದ್ದು, ಇದೆಲ್ಲವು ದೇವಸ್ಥಾನದ ಅಭಿರಕ್ಷೆಯಲ್ಲಿರುತ್ತದೆ. ದೇವಾಲಯದ ವಾರ್ಷಿಕ ಆದಾಯವು ಸುಮಾರು 1 ರಿಂದ 1.50 ಕೋಟಿಯಿದ್ದು, ಈ ಬೃಹತ್ ಮೊತ್ತದ ಹಣಕಾಸು ವ್ಯವಹಾರವಿರುವ ಸಂಸ್ಥೆಯನ್ನು ಖಾಸಗಿಯವರ ವಶಕ್ಕೆ ನೀಡುವುದು ಸಮಂಜಸವಾಗಲಾರದು.
- ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ವಿನಾಯಕ ದೇವಾಲಯವು ಸರ್ಕಾರದ ನಿಯಂತ್ರಣದಲ್ಲಿ ಇರಲು ಅರ್ಹ ಸಂಸ್ಥೆಯಾಗಿದ್ದು, ಈ ಸಂಸ್ಥೆಯಲ್ಲಿ ಬೃಹತ್ ಮೊತ್ತದ ವಜ್ರ, ಚಿನ್ನ ಮತ್ತು ಬೆಳ್ಳಿ ಆಭರಣಗಳು ಇದ್ದು, ಕೋಟ್ಯಾಂತರ ರೂಪಾಯಿ ಆದಾಯ ಬರುವುದರಿಂದ ಈ ಸಂಸ್ಥೆಯನ್ನು ಅಗತ್ಯ ಭದ್ರತೆಯೊಂದಿಗೆ ಇದರ ಆಡಳಿತವನ್ನು ಪಾರದರ್ಶಕ ಹಾಗೂ ಜವಾಬ್ದಾರಿಯುತ ಹೊಣೆಗಾರಿಕೆಯಲ್ಲಿ ನಿರ್ವಹಿಸಬೇಕಾಗಿರುವುದರಿಂದ ಖಾಸಗಿ ಸಂಸ್ಥೆಯವರ ಆಡಳಿತದಿಂದ ವಿಮುಕ್ತಿಗೊಳಿಸಿ ಸದರಿ ದೇವಾಲಯದ ಆಡಳಿತವನ್ನು ಸರ್ಕಾರದ ನಿಯಂತ್ರಣದಲ್ಲಿ ಇರಿಸಿಕೊಳ್ಳುವುದು ಅಗತ್ಯವಿರುತ್ತದೆ.

ಅಪರ ಜಿಲ್ಲಾಧಿಕಾರಿ ಮತ್ತು ಉಪ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ವರದಿಯನ್ನಾಧರಿಸಿ ಬೆಂಗಳೂರು ನಗರ, ಜಯನಗರ 4ನೇ ಬಡಾವಣೆಯಲ್ಲಿರುವ ಶ್ರೀ ವಿನಾಯಕ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997ರ ಸೆಕ್ಷನ್ 42 ಹಾಗೂ 43 ರನ್ವಯ ಘೋಷಿತ ಸಂಸ್ಥೆಯೆಂದು ಘೋಷಿಸಿ ಆದೇಶ ಹೊರಡಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಕೋರಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 42, ಮುಅಬಿ 2016, ಬೆಂಗಳೂರು, ದಿನಾಂಕ : 03–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ, ಜಯನಗರ ನಾಲ್ಕನೇ ಬಡಾವಣೆಯಲ್ಲಿರುವ ಶ್ರೀ ವಿನಾಯಕ ದೇವಾಲಯದಲ್ಲಿ ಸಾರ್ವಜನಿಕ ಹಣ ಮತ್ತು ಆಸ್ತಿ ದುರುಪಯೋಗ/ಅವ್ಯವಹಾರದ ಕುರಿತು ಮಾನ್ಯ ಉಚ್ಚ ನ್ಯಾಯಾಲಯದ ನಿರ್ದೇಶನದನ್ವಯ ಕಾಯ್ದೆಯ ಕಲಂ 43ರ ಉಪಬಂಧಗಳಡಿಯಲ್ಲಿ ಮರು ವಿಚಾರಣೆ ನಡೆಸಿದ ವರದಿಯನ್ನಾಧರಿಸಿ ಬೆಂಗಳೂರು ನಗರ ಜಯನಗರ, ನಾಲ್ಕನೇ ಬಡಾವಣೆಯಲ್ಲಿರುವ ಶ್ರೀ ವಿನಾಯಕ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಅಧಿನಿಯಮ 1997ರ ಅಧಿನಿಯಮ 42 ಮತ್ತು 43 ರನ್ವಯ ಘೋಷಿತ ಸಂಸ್ಥೆಯೆಂದು ಘೋಷಿಸಿ ಆದೇಶಿಸಿದೆ.

**P.R. 557**

**S.C. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ನಾಗರತ್ನಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).

## ಒಳಾಡಳಿತ ಸಚಿವಾಲಯ

**ವಿಷಯ :** ದಿನಾಂಕ : 26–04–2016 ರಂದು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಉಳ್ಳಾಲ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಮಾರಣಾಂತಿಕ ಹಲ್ಲೆಗೊಳಗಾದ ಶ್ರೀ ಸಫ್ವಾನ್ ಹಸನ್ ಎಂಬುವರಿಗೆ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ರವರ ಪತ್ರ ಸಂಖ್ಯೆ: ಎಂ.ಎ.ಜಿ(2)ಸಿಆರ್–25/2016–17/177280/ಸಿ4, ದಿನಾಂಕ : 09–06–2016 ಮತ್ತು 01–07–2016.
2. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ : 06 ಸಿಆರ್‌ಆರ್ : 2014, ದಿನಾಂಕ : 18–08–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರ ದಿನಾಂಕ : 09–06–2016 ಮತ್ತು 01–07–2016ರ ಪತ್ರಗಳಲ್ಲಿ, ದಿನಾಂಕ : 26–04–2016 ರಂದು ದಕ್ಷಿಣ ಕನ್ನಡ ಜಿಲ್ಲೆಯ ಉಳ್ಳಾಲ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಮಾರಣಾಂತಿಕ ಹಲ್ಲೆಗೊಳಗಾದ ಶ್ರೀ ಸಫ್ವಾನ್ ಹಸನ್ ಎಂಬುವರು ಗಾಯಗೊಂಡ ಹಿನ್ನೆಲೆಯಲ್ಲಿ ಚಿಕಿತ್ಸೆಗಾಗಿ ಮಂಗಳೂರು ನಗರದ ಯೂನಿಟಿ ಆಸ್ಪತ್ರೆಗೆ ದಾಖಲಿಸಿದ್ದು, ತೀವ್ರತರವಾಗಿ ಗಾಯಗೊಂಡ ಹಿನ್ನೆಲೆಯಲ್ಲಿ, ಇವರಿಗೆ ಪರಿಹಾರ ಧನವಾಗಿ ₹. 50,000/– (ರೂಪಾಯಿಗಳು ಐವತ್ತು ಸಾವಿರಗಳು ಮಾತ್ರ) ಗಳನ್ನು ಬಿಡುಗಡೆ ಗೊಳಿಸಲು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ದಿನಾಂಕ : 26–04–2016 ರಂದು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಉಳ್ಳಾಲ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆದ ಅಹಿತಕರ ಘಟನೆಯಲ್ಲಿ ಮಾರಣಾಂತಿಕ ಹಲ್ಲೆಗೊಳಗಾಗಿ ತೀವ್ರತರವಾಗಿ ಗಾಯಗೊಂಡ ಶ್ರೀ ಸಫ್ವಾನ್ ಹಸನ್ ಎಂಬುವರಿಗೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ಪರಿಹಾರ ಧನವನ್ನು ನಿಗದಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ/195/ಎಸ್‌ಎಸ್‌ಟಿ/2016, ಬೆಂಗಳೂರು, ದಿನಾಂಕ : 04–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ: 26–04–2016 ರಂದು ಉಳ್ಳಾಲ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆದ ಘಟನೆಯಲ್ಲಿ ಮಾರಣಾಂತಿಕ ಹಲ್ಲೆಗೊಳಗಾಗಿ ತೀವ್ರತರವಾಗಿ ಗಾಯಗೊಂಡ ಶ್ರೀ ಸಫ್ವಾನ್ ಹಸನ್ ಎಂಬುವರಿಗೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ಈ ಕೆಳಕಂಡಂತೆ ಪರಿಹಾರ ಧನವನ್ನು ನಿಗದಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ.

| ಕ್ರ.ಸಂ. | ಹೆಸರು<br>ಶ್ರೀ/ಶ್ರೀಮತಿ | ಮಂಜೂರು ಮಾಡಲಾದ ಮೊತ್ತ<br>₹. |
|---|---|---|
| 1 | ಶ್ರೀ ಸಫ್ವಾನ್ ಹಸನ್ ಬಿನ್ ಅಬ್ದುಲ್ ಹುಸ್ಮಾನ್, ಫಾತಿಮಾ ಝುಟೇಜ್ ತಕ್ವ ಜುಮ್ಮಾ ಮಸೀದಿ ಬಳಿ, ಕಲ್ಲಾಪು, ಉಳ್ಳಾಲ ಗ್ರಾಮ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು. | 50,000/– |

ಈ ಪರಿಹಾರ ಮೊತ್ತವನ್ನು 2016–17ನೇ ಸಾಲಿನ ಲೆಕ್ಕ ಶೀರ್ಷಿಕೆ : 2235–60–200–3–01–100ರಡಿ ಒದಗಿಸಿರುವ ಅನುದಾನದಲ್ಲಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರು ವಿತರಿಸಲು ಮಂಜೂರಾತಿ ನೀಡಿದೆ. ಈ ಅನುದಾನದ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ ; ಆಇ:353ವೆಚ್ಚ:11:2014, ದಿನಾಂಕ : 18–07–2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

P.R. 558

S.C. 50

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಪದ್ಮಿನಿದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಕಾನೂನು ಮತ್ತು ಸುವ್ಯವಸ್ಥೆ).

## ಒಳಾಡಳಿತ ಸಚಿವಾಲಯ

**ವಿಷಯ :** ದಿನಾಂಕ : 23–09–2015 ರಂದು ಬಾಗಲಕೋಟೆ ಜಿಲ್ಲೆಯ ಮುಧೋಳ ನಗರದಲ್ಲಿ ಗಣೇಶ ಮೂರ್ತಿ ವಿಸರ್ಜನೆಯ ಮೆರವಣಿಗೆ ಸಂದರ್ಭದಲ್ಲಿ ಆದ ಕೋಮು ಗಲಭೆಯಲ್ಲಿ ಹಾನಿಯಾದ ಶಾಶ್ವತ ಕಟ್ಟಡಗಳ ಸಂತ್ರಸ್ಥರಾದ ಶ್ರೀ ರಾಜೇಸಾಬ ತಂದೆ ಅಕ್ಬರ ಇಮಾಮ್‌ಸಾಬ ಎಂಬುವರಿಗೆ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಇವರ ಪತ್ರ ಸಂಖ್ಯೆ : ಎಂ.ಎ.ಜಿ/ಸಿಆರ್–127/2015–16, ದಿನಾಂಕ : 04–07–2016.
2. ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ, ಇವರ ಪತ್ರ ಸಂ:ಪ್ರಾಆಬೆ:ಎಂಎಜಿ:ವಿವ–32:2015–16, ದಿನಾಂಕ : 15–12–2015.
3. ಈ ಕಛೇರಿಯ ಸಮ ಸಂಖ್ಯೆ : ಹೆಚ್‌ಡಿ:482:ಎಸ್‌ಎಸ್‌ಟಿ:2015, ದಿನಾಂಕ : 20–11–2015.
4. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ:06:ಸಿಆರ್‌ಆರ್:2014, ದಿನಾಂಕ : 18–08–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ರವರ ದಿನಾಂಕ : 04–07–2016 ಪತ್ರದಲ್ಲಿ, ದಿನಾಂಕ : 23–09–2015 ರಂದು ಬಾಗಲಕೋಟೆ ಜಿಲ್ಲೆಯ ಮುಧೋಳ ನಗರದಲ್ಲಿ ಗಣೇಶ ಮೂರ್ತಿ ವಿಸರ್ಜನೆಯ ಮೆರವಣಿಗೆ ಸಂದರ್ಭದಲ್ಲಿ ಆದ ಕೋಮು ಗಲಭೆಯಲ್ಲಿ ಹಾನಿಯಾದ ಶಾಶ್ವತ ಕಟ್ಟಡಗಳ ಸಂತ್ರಸ್ಥರಾದ ಶ್ರೀ ರಾಜೇಸಾಬ ತಂದೆ ಅಕ್ಬರ ಇಮಾಮ್‌ಸಾಬ ಎಂಬುವರ ಎರಡು ಅಂಗಡಿಗಳ ಪ್ರತಿ ಸ್ಥಿರ ಆಸ್ತಿಗೆ ತಲಾ ಒಂದು ಲಕ್ಷ ರೂಪಾಯಿಯಂತೆ ಒಟ್ಟು –02 ಲಕ್ಷ (ಎರಡು ಲಕ್ಷ ರೂಪಾಯಿಗಳು ಮಾತ್ರ) ₹. ಗಳ ಪರಿಹಾರ ಬಿಡುಗಡೆ ಗೊಳಿಸಲು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮುಂದುವರೆದು, ಮೇಲೆ ಓದಲಾದ (3)ರ ದಿನಾಂಕ : 20–11–2015ರ ಆದೇಶದಲ್ಲಿ, ದಿನಾಂಕ : 23–09–2015 ರಂದು ಬಾಗಲಕೋಟೆ ಜಿಲ್ಲೆಯ ಮುಧೋಳ ನಗರದಲ್ಲಿ ಗಣೇಶ ವಿಸರ್ಜನೆಯ ಮೆರವಣಿಗೆಯ ಸಂದರ್ಭದಲ್ಲಿ ಜನತಾ ಪ್ಲಾಟ್ ಪ್ರದೇಶದಲ್ಲಿ ಆದ ಗಲಭೆಯಲ್ಲಿ ಎರಡು ಕೋಮುಗಳ ನಡುವೆ ಉಂಟಾದ ಘರ್ಷಣೆಯಲ್ಲಿ ಹಾನಿಯಾದ ಮನೆಗಳಿಗೆ, ಅಂಗಡಿ ಮುಂಗಟ್ಟುಗಳಿಗೆ ವಾಹನಗಳಿಗೆ ಹಾಗೂ ತಳ್ಳುವ ಗಾಡಿಗಳಿಗೆ (4)ರ ಆದೇಶದನ್ವಯ ಪರಿಹಾರ ಧನವಾಗಿ ₹. 18,30,000 (ರೂಪಾಯಿ ಹದಿನೆಂಟು ಲಕ್ಷದ ಮೂವತ್ತು ಸಾವಿರ ಮಾತ್ರ) ಗಳನ್ನು (3)ರ ದಿನಾಂಕ : 20–11–2015ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿದ್ದು, ಉಳಿಕೆ ಪರಿಹಾರ ಧನವನ್ನು ಪ್ರಾದೇಶಿಕ ಆಯುಕ್ತರು, ಬೆಳಗಾವಿರವರಿಂದ ಸ್ವೀಕೃತವಾದ ನಂತರ ಕ್ರಮ ವಹಿಸಲಾಗುವುದೆಂದು ತಿಳಿಸಲಾಗಿತ್ತು. ಅದರಂತೆ ಮೇಲೆ ಓದಲಾದ (3)ರಲ್ಲಿ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿರವರಿಂದ ಮತ್ತು (1)ರಲ್ಲಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ರವರಿಂದ ಪ್ರಸ್ತಾವನೆಯು ಸ್ವೀಕೃತವಾಗಿದ್ದು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ದಿನಾಂಕ : 23–09–2015 ಬಾಗಲಕೋಟೆ ಜಿಲ್ಲೆಯ ಮುಧೋಳ ನಗರದಲ್ಲಿ ಗಣೇಶ ಮೂರ್ತಿ ವಿಸರ್ಜನೆಯ ಮೆರವಣಿಗೆ ಸಂದರ್ಭದಲ್ಲಿ ಆದ ಕೋಮು ಗಲಭೆಯಲ್ಲಿ ಹಾನಿಯಾದ ಶಾಶ್ವತ ಕಟ್ಟಡಗಳ ಸಂತ್ರಸ್ಥರಾದ ಶ್ರೀ ರಾಜೇಸಾಬ ತಂದೆ ಅಕ್ಬರ ಇಮಾಮ್‌ಸಾಬ ಎಂಬುವರಿಗೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ಪರಿಹಾರ ಧನವನ್ನು ನಿಗದಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ/482/ಎಸ್‌ಎಸ್‌ಟಿ/2015, ಬೆಂಗಳೂರು, ದಿನಾಂಕ : 04–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ: 23–09–2015 ರಂದು ಬಾಗಲಕೋಟೆ ಜಿಲ್ಲೆಯ ಮುಧೋಳ ನಗರದಲ್ಲಿ ಗಣೇಶ ಮೂರ್ತಿ ವಿಸರ್ಜನೆಯ ಮೆರವಣಿಗೆ ಸಂದರ್ಭದಲ್ಲಿ ಆದ ಕೋಮು ಗಲಭೆಯಲ್ಲಿ ಹಾನಿಯಾದ ಶಾಶ್ವತ ಕಟ್ಟಡಗಳ ಸಂತ್ರಸ್ಥರಾದ ಶ್ರೀ ರಾಜೇಸಾಬ ತಂದೆ ಅಕ್ಬರ ಇಮಾಮ್‌ಸಾಬ ಎಂಬುವರಿಗೆ ಮೇಲೆ ಓದಲಾದ (4)ರ ಸರ್ಕಾರಿ ಆದೇಶದನ್ವಯ ಈ ಕೆಳಕಂಡಂತೆ ಪರಿಹಾರ ಧನವನ್ನು ನಿಗದಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ.

| ಕ್ರ.ಸಂ. | ಹೆಸರು<br>ಶ್ರೀ/ಶ್ರೀಮತಿ | ಆಸ್ತಿ ಸಂಖ್ಯೆ | ಮಂಜೂರು ಮಾಡಲಾದ ಮೊತ್ತ<br>₹. |
|---|---|---|---|
| 1 | ಶ್ರೀ ರಾಜೇಸಾಬ ತಂದೆ ಅಕ್ಬರ ಇಮಾಮ್‌ಸಾಬ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ ರವರ 2 ಅಂಗಡಿಗಳ ಪ್ರತಿ ಸ್ಥಿರ ಆಸ್ತಿಗೆ ತಲಾ ಒಂದು ಲಕ್ಷದಂತೆ. | ಸಿಟಿಎಸ್ : 69,70 ಮತ್ತು 77 | 2,00,000/–<br>(2 ಲಕ್ಷ) |
| | **ಒಟ್ಟು** | | **2,00,000–00** |

ಈ ಪರಿಹಾರ ಮೊತ್ತವನ್ನು 2016–17ನೇ ಸಾಲಿನ ಲೆಕ್ಕ ಶೀರ್ಷಿಕೆ : 2235–60–200–3–01–100ರಡಿ ಒದಗಿಸಿರುವ ಅನುದಾನದಲ್ಲಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ರವರು ವಿತರಿಸಲು ಮಂಜೂರಾತಿ ನೀಡಿದೆ. ಈ ಅನುದಾನದ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ ; ಆಇ:353ವೆಚ್ಚ:11:2014, ದಿನಾಂಕ : 18–07–2014 ಮತ್ತು ಆಂತರಿಕ ಆರ್ಥಿಕ ಸಲಹೆಗಾರರು, ಒಳಾಡಳಿತ ಮತ್ತು ಸಾರಿಗೆ ಇಲಾಖೆಯವರ ಟಿಪ್ಪಣಿ ಸಂಖ್ಯೆ:ಒಸಾಇ/45480/ಆಂಆಸ/2015, ದಿನಾಂಕ : 31–10–2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**P.R. 559**

**S.C. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಪದ್ಮಿನಿದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಕಾನೂನು ಮತ್ತು ಸುವ್ಯವಸ್ಥೆ).

## ಒಳಾಡಳಿತ ಸಚಿವಾಲಯ

**ವಿಷಯ :** ದಿನಾಂಕ : 06–08–2015 ರಂದು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಬಂಟ್ವಾಳ ನಗರ ಪೋಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆದ ಮಾರಣಾಂತಿಕ ಹಲ್ಲೆಯಲ್ಲಿ ಗಾಯಗೊಂಡ ಶ್ರೀ ಮೊಹಮ್ಮದ್ ಮುಸ್ತಾಫ ಮತ್ತು ಮರಣ ಹೊಂದಿದ ಶ್ರೀ ನಾಸೀರ್ @ ಮಹಮ್ಮದ್ ನಾಸೀರ್ ಎಂಬುವರ ಕುಟುಂಬದವರಿಗೆ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :**

1. ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ರವರ ಪತ್ರ ಸಂಖ್ಯೆ : ಎಂ.ಎ.ಜಿ(2)ಸಿಆರ್–948/2015–16/174152/ಸಿ4, ದಿನಾಂಕ : 05–04–2016 ಮತ್ತು 01–07–2016.
2. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ : 06 ಸಿಆರ್‌ಆರ್ : 2014, ದಿನಾಂಕ : 18–08–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರ ದಿನಾಂಕ : 05–04–2016 ಮತ್ತು 01–07–2016ರ ಪತ್ರಗಳಲ್ಲಿ, ದಿನಾಂಕ : 06–08–2015 ರಂದು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆದ ಮಾರಣಾಂತಿಕ ಹಲ್ಲೆಯಲ್ಲಿ ಗಾಯಗೊಂಡ ಶ್ರೀ ಮೊಹಮ್ಮದ್ ಮುಸ್ತಾಫ ಎಂಬುವರಿಗೆ ₹. 38,970/– (ರೂಪಾಯಿಗಳು ಮೂವತ್ತೆಂಟು ಸಾವಿರದ ಒಂಬೈನೂರ ಎಪ್ಪತ್ತು ಮಾತ್ರ) ಮತ್ತು ಮರಣ ಹೊಂದಿದ ಶ್ರೀ ನಾಸೀರ್ @ ಮಹಮ್ಮದ್ ನಾಸೀರ್ ಎಂಬುವರ ಕುಟುಂಬದವರಿಗೆ ₹. 1,36,730/– (ರೂಪಾಯಿಗಳು ಒಂದು ಲಕ್ಷದ ಮೂವತ್ತಾರು ಸಾವಿರದ ಏಳುನೂರ ಮೂವತ್ತು ಮಾತ್ರ) ಗಳನ್ನು ಪರಿಹಾರ ಧನವಾಗಿ ಒಟ್ಟು 1,75,700/– ರೂ.ಗಳನ್ನು (ಒಂದು ಲಕ್ಷದ ಎಪ್ಪತ್ತೈದು ಸಾವಿರದ ಏಳುನೂರು ರೂಪಾಯಿಗಳು ಮಾತ್ರ) ಬಿಡುಗಡೆ ಗೊಳಿಸಲು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ದಿನಾಂಕ : 06–08–2015 ರಂದು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಬಂಟ್ವಾಳ ನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆದ ಮಾರಣಾಂತಿಕ ಹಲ್ಲೆಯಲ್ಲಿ ಗಾಯಗೊಂಡ ಶ್ರೀ ಮೊಹಮ್ಮದ್ ಮುಸ್ತಾಫ ಮತ್ತು ಮರಣ ಹೊಂದಿದ ಶ್ರೀ ನಾಸೀರ್ @ ಮಹಮ್ಮದ್ ನಾಸೀರ್ ಎಂಬುವರ ಕುಟುಂಬದವರಿಗೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ಪರಿಹಾರ ಧನವನ್ನು ನಿಗದಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ/323/ಎಸ್‌ಎಸ್‌ಟಿ/2015, ಬೆಂಗಳೂರು, ದಿನಾಂಕ : 04–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ : 06–08–2015 ರಂದು ಬಂಟ್ವಾಳ ನಗರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆದ ಮಾರಣಾಂತಿಕ ಹಲ್ಲೆಯಲ್ಲಿ ಗಾಯಗೊಂಡ ಶ್ರೀ ಮೊಹಮ್ಮದ್ ಮುಸ್ತಾಫ ಮತ್ತು ಮರಣ ಹೊಂದಿದ ಶ್ರೀ ನಾಸೀರ್ @ ಮಹಮ್ಮದ್ ನಾಸೀರ್ ಎಂಬುವರ ಕುಟುಂಬದವರಿಗೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ಈ ಕೆಳಕಂಡಂತೆ ಪರಿಹಾರ ಧನವನ್ನು ನಿಗದಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ.

| ಕ್ರ.ಸಂ. | ಹೆಸರು<br>ಶ್ರೀ/ಶ್ರೀಮತಿ | ಮಂಜೂರು ಮಾಡಲಾದ ಮೊತ್ತ<br>₹. |
|---|---|---|
| 1 | ಶ್ರೀ ಮೊಹಮ್ಮದ್ ಮುಸ್ತಾಫ ತಂದೆ ಅಬ್ದುಲ್ ರಹಮಾನ್, ಹಾಲಾಡಿ ಮನೆ, ಸಜೀಪ ಮುನ್ನೂರು ಗ್ರಾಮ, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು. | 38,970/– |
| 2 | ಶ್ರೀ ನಸೀರ್ @ ಮಹಮ್ಮದ್ ನಾಸೀರ್, ತಂದೆ ಇಬ್ರಾಹಿಂ, ಮಲೆಯ ಬೆಟ್ಟು, ಸಜೀಪ ಮುನ್ನೂರು ಗ್ರಾಮ, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು. | 1,36,730/– |
| | **ಒಟ್ಟು** | **1,75,700–00** |

ಈ ಪರಿಹಾರ ಮೊತ್ತವನ್ನು 2016–17ನೇ ಸಾಲಿನ ಲೆಕ್ಕ ಶೀರ್ಷಿಕೆ : 2235–60–200–3–01–100ರಡಿ ಒದಗಿಸಿರುವ ಅನುದಾನದಲ್ಲಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರು ವಿತರಿಸಲು ಮಂಜೂರಾತಿ ನೀಡಿದೆ. ಈ ಅನುದಾನದ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ ; ಆಇ:353ವೆಚ್ಚ:11:2014, ದಿನಾಂಕ : 18–07–2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**P.R. 560**
**S.C. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಪದ್ಮಿನಿದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

## ಒಳಾಡಳಿತ ಸಚಿವಾಲಯ

**ವಿಷಯ :** ದಿನಾಂಕ : 12–04–2016 ರಂದು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಉಳ್ಳಾಲ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆದ ಅಹಿತಕರ ಘಟನೆಯಲ್ಲಿ ಹತ್ಯೆಗೊಳಗಾದ ಶ್ರೀ ರಾಜೇಶ್ ಕೋಟ್ಯಾನ್ ಬಿನ್ ದಿ.ಶೀನ ಕರ್ಕೇರ, ಎಂಬುವರ ಕುಟುಂಬದವರಿಗೆ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :**

1. ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ರವರ ಪತ್ರ ಸಂಖ್ಯೆ : ಎಂ.ಎ.ಜಿ(2)ಸಿಆರ್–25/2016–17/177280/ಸಿ4, ದಿನಾಂಕ : 22–04–2016 ಮತ್ತು 01–07–2016.
2. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ : 06 ಸಿಆರ್‌ಆರ್ : 2014, ದಿನಾಂಕ : 18–08–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರ ದಿನಾಂಕ : 22–04–2016 ಮತ್ತು 01–07–2016ರ ಪತ್ರಗಳಲ್ಲಿ, ದಿನಾಂಕ : 12–04–2016 ರಂದು ದಕ್ಷಿಣ ಕನ್ನಡ ಜಿಲ್ಲೆಯ ಉಳ್ಳಾಲ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆದ ಅಹಿತಕರ ಘಟನೆಯಲ್ಲಿ ಹತ್ಯೆಗೊಳಗಾದ ಶ್ರೀ ರಾಜೇಶ್ ಕೋಟ್ಯಾನ್ ಬಿನ್ ದಿ.ಶೀನ ಕರ್ಕೇರ, ಎಂಬುವರ ಕುಟುಂಬದವರಿಗೆ ಪರಿಹಾರ ಧನವಾಗಿ ₹. 5,00,000/– (ಐದು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಗೊಳಿಸಲು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ದಿನಾಂಕ : 12–04–2016 ರಂದು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಉಳ್ಳಾಲ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆದ ಅಹಿತಕರ ಘಟನೆಯಲ್ಲಿ ಹತ್ಯೆಗೊಳಗಾದ ಶ್ರೀ ರಾಜೇಶ್ ಕೋಟ್ಯಾನ್ ಬಿನ್ ದಿ.ಶೀನ ಕರ್ಕೇರಿ, ಎಂಬುವರಿಗೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ಪರಿಹಾರ ಧನವನ್ನು ನಿಗದಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ/145/ಎಸ್‌ಎಸ್‌ಟಿ/2016, ಬೆಂಗಳೂರು, ದಿನಾಂಕ : 04–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ : 12–04–2016 ರಂದು ಉಳ್ಳಾಲ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆದ ಅಹಿತಕರ ಘಟನೆಯಲ್ಲಿ ಹತ್ಯೆಗೊಳಗಾದ ಶ್ರೀ ರಾಜೇಶ್ ಕೋಟ್ಯಾನ್ ಬಿನ್ ದಿ.ಶೀನ ಕರ್ಕೇರ, ಎಂಬುವರಿಗೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ಈ ಕೆಳಕಂಡಂತೆ ಪರಿಹಾರ ಧನವನ್ನು ನಿಗದಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ.

| ಕ್ರ.ಸಂ. | ಹೆಸರು<br>ಶ್ರೀ/ಶ್ರೀಮತಿ | ಮಂಜೂರು ಮಾಡಲಾದ ಮೊತ್ತ<br>₹. |
|---|---|---|
| 1 | ಶ್ರೀ ರಾಜೇಶ್ ಕೋಟ್ಯಾನ್ ಬಿನ್ ದಿ.ಶೀನ ಕರ್ಕೇರ, # ಯುಬಿ ಎಂ.ಸಿ. ಶಾಲೆಯ ಎದುರು, ಮೊಗವೀರ ಪಟ್ಟಣ ಉಳ್ಳಾಲ ಗ್ರಾಮ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು. | 5,00,000/– |

ಈ ಪರಿಹಾರ ಮೊತ್ತವನ್ನು 2016–17ನೇ ಸಾಲಿನ ಲೆಕ್ಕ ಶೀರ್ಷಿಕೆ : 2235–60–200–3–01–100ರಡಿ ಒದಗಿಸಿರುವ ಅನುದಾನದಲ್ಲಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರು ವಿತರಿಸಲು ಮಂಜೂರಾತಿ ನೀಡಿದೆ. ಈ ಅನುದಾನದ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ ; ಆಇ:353ವೆಚ್ಚ:11:2014, ದಿನಾಂಕ : 18–07–2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

P.R. 561

S.C. 50

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಪದ್ಮಿನಿದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

## ಕಾನೂನು ಸಚಿವಾಲಯ

**ವಿಷಯ :** ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಹುದ್ದೆಗಳ ನೇಮಕಾತಿಯನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಲಾ 81 ಕೆಎಲ್‌ಎಂ 2009, ದಿನಾಂಕ: 28–11–2012.
2) ಸರ್ಕಾರಿ ಆದೇಶ ಸಂಖ್ಯೆ: ಲಾ 40 ಕೆಎಲ್‌ಎಂ 2013, ದಿನಾಂಕ: 26–08–2015.
3) ಸರ್ಕಾರದ ತಿದ್ದೋಲೆ ಸಂಖ್ಯೆ: ಲಾ 40 ಕೆಎಲ್‌ಎಂ 2013, ದಿನಾಂಕ: 23–12–2015.
4) ಸರ್ಕಾರಿ ಸೇರ್ಪಡೆ ಆದೇಶ ಸಂಖ್ಯೆ: ಲಾ 40 ಕೆಎಲ್‌ಎಂ 2013, ದಿನಾಂಕ: 23–12–2015.
5) ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಶಿಇ/17/ಖಾಕಾಕಾ/2012–13/ನೇವಿ–2, ದಿನಾಂಕ: 21.01.2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಸರ್ಕಾರಿ ಆದೇಶ ದಿನಾಂಕ: 28.11.2012ರಲ್ಲಿ ಪ್ರೋ. ಮಾಲಿ ಮುದ್ದಣ ವರದಿಯನ್ನಾಧರಿಸಿ ಸರ್ಕಾರವು ಸುಸ್ಥಿತಿಯಲ್ಲಿರುವ ಹಾಗೂ ಸತತವಾಗಿ ಆಯಾ ವಿಶ್ವವಿದ್ಯಾಲಯಗಳಿಗೆ 5 (ಐದು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ 3 (ಮೂರು) ವರ್ಷಗಳ ಎಲ್.ಎಲ್.ಬಿ ಕೋರ್ಸು ಅಥವಾ ಎರಡೂ ಅವಧಿಯ ಎಲ್.ಎಲ್.ಬಿ. ಕೋರ್ಸ್‌ಗಳನ್ನು ನಡೆಸಲು ಸಂಯೋಜನೆ ಮಾಡಿಕೊಂಡಿದ್ದ ಒಟ್ಟು 19 ಖಾಸಗಿ ಕಾನೂನು ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಲು ತಾತ್ವಿಕವಾಗಿ ಒಪ್ಪಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅನುದಾನಕ್ಕೆ ಒಳಪಡಿಸಿದ ಖಾಸಗಿ ಕಾನೂನು ಕಾಲೇಜುಗಳ ಪೈಕಿ ಕ್ರಮ ಸಂಖ್ಯೆ: (19)ರ **ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ** ಇಲ್ಲಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ನೇಮಕಾತಿಯನ್ನು ಅನುಮೋದಿಸಲಾಗಿದೆ.

ಸದರಿ ಆದೇಶದಲ್ಲಿ ಕೆಲವೊಂದು ಕಾರಣಕ್ಕಾಗಿ ಬೋಧಕ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ. ಈ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವೇತನಾನುದಾನಕ್ಕೆ ಒಳಪಡಿಸದೇ ಇರುವ ಪ್ರಕರಣಗಳ ಬಗ್ಗೆ ಸಂಬಂಧಪಟ್ಟ ಸಿಬ್ಬಂದಿಗಳು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಯುಕ್ತ ಮಾರ್ಗದಲ್ಲಿ ಅಗತ್ಯ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಮನವಿ ಸಲ್ಲಿಸಿದಲ್ಲಿ, ಅಂತಹ ಮನವಿಗಳನ್ನು ನಿಯಮಾನುಸಾರ ಪರಿಶೀಲಿಸಲಾಗುವುದು ಎಂದು ದಿನಾಂಕ: 26.08.2015ರ ಆದೇಶದಲ್ಲಿ ಸೂಚಿಸಲಾಗಿತ್ತು.

ಅದರಂತೆ, ಮೇಲೆ ಓದಲಾದ (3)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ದಿನಾಂಕ: 26.08.2015ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸದೇ ಇರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಬಗ್ಗೆ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸಿ, ವೇತನಾನುದಾನಕ್ಕೆ ಒಳಪಡಿಸುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿ ಶ್ರೀಮತಿ ಡಾ॥ ಸವಿತಾ ಎಲ್.ಪಾಟೀಲ್, ಶ್ರೀಮತಿ ಪದ್ಮ ಜಿ.ಧನವಾಡೆ, ಶ್ರೀ ಶಿವಕುಮಾರ್ ಗೌಡ ಎಸ್., ಎಸ್.ಬಿ. ಮಗದುಮ್ಮ ಮತ್ತು ಸಂಗಣ್ಣನವರ್ ಇವರುಗಳ ಬಗ್ಗೆ ಮಾಹಿತಿ ನೀಡಿರುತ್ತಾರೆ.

ಶ್ರೀಮತಿ ಪದ್ಮಾವತಿ.ಬಾಹುಬಲಿ.ಧನವಾಡೆ ಇವರು ದಿನಾಂಕ:01.07.1999 ರಿಂದ 04.09.2010 ರವರೆಗೆ ಬೇರೆ ಬೇರೆ ಸಂಸ್ಥೆಗಳಲ್ಲಿ ಮತ್ತು ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ ಇಲ್ಲಿ ಸೇವೆ ಸಲ್ಲಿಸಿದ್ದು, ನಂತರ 01 ವರ್ಷ 05 ತಿಂಗಳು 10 ದಿನ ಎಲ್ಲಿಯೂ ಸೇವೆ ಸಲ್ಲಿಸಿರುವುದಿಲ್ಲ. ದಿನಾಂಕ: 14.02.2013 ರಿಂದ ಸದರಿ ಕಾಲೇಜಿನಲ್ಲಿ ಪುನಃ ಸೇವೆಗೆ ಸೇರಿರುತ್ತಾರೆ. ಇವರ ಜನ್ಮ ದಿನಾಂಕ:08.04.1972 ಆಗಿರುತ್ತದೆ. ನೇಮಕಾತಿ ದಿನಾಂಕದಂದು ವಯೋಮಿತಿ ಮೀರಿರುತ್ತದೆ. ಸದರಿಯವರು NET/SLET/Ph.D ಪದವಿ ಹೊಂದಿಲ್ಲದೆ ಇರುವ ಕಾರಣ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ಅವಕಾಶವಿಲ್ಲ ಎಂದು ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು ತಿಳಿಸಿರುತ್ತಾರೆ.

ಶ್ರೀ ಶಿವಕುಮಾರ್‌ಗೌಡ.ಎಸ್.ಪಾಟೀಲ್ ಇವರು ಕೂಡಾ 2009ರ ನಂತರ ನೇಮಕಾತಿ ಹೊಂದಿರುವುದರಿಂದ ಇವರು NET/SLET/Ph.D ಪದವಿ ಹೊಂದಿಲ್ಲದೆ ಇರುವ ಕಾರಣ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ಅವಕಾಶವಿಲ್ಲ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ (4)ರ ಸೇರ್ಪಡೆ ಆದೇಶದಲ್ಲಿ ಶ್ರೀಮತಿ ಎಸ್.ಬಿ.ಮುಗದಮ್ಮ, ಸಿಸಿಟಿ ಮತ್ತು ಶ್ರೀ ಸಂಗಣ್ಣವರ್, ಬೆರಳಚ್ಚುಗಾರರು ಇವರುಗಳಿಗೆ ಕ್ರಮವಾಗಿ ಕನ್ನಡ ಜ್ಯೂನಿಯರ್ ಮತ್ತು ಕನ್ನಡ ಮತ್ತು ಇಂಗ್ಲಿಷ್ ಸೀನಿಯರ್ ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣರಾಗಲು 2 ವರ್ಷಗಳ ಕಾಲಾವಕಾಶ ನೀಡಲಾಗಿದೆ.

ಡಾ॥ ಸವಿತಾ ಎಲ್.ಪಾಟೀಲ್, ಸಹಾಯಕ ಪ್ರಾಧ್ಯಾಪಕರು ಇವರು ನೇಮಕಾತಿ ದಿನಾಂಕದಂದು 37 ವರ್ಷ ಹೊಂದಿದ್ದರಿಂದ ಇವರನ್ನು ದಿನಾಂಕ:26.08.2015 ರ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವುದಿಲ್ಲ. ಆದರೆ ಇವರು 2007–08 ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇಲ್ಲಿ ಸ್ನಾತಕೋತ್ತರ ವಿಭಾಗದಲ್ಲಿ ಸಹಾಯಕ ಪ್ರಾಧ್ಯಾಪಕರಾಗಿ ನೇಮಕಗೊಂಡಿದ್ದು, ಇವರು ನೇಮಕಾತಿ ಹೊಂದಿದ ಸಂದರ್ಭದಲ್ಲಿ ಇವರ ವಯಸ್ಸು 32 ವರ್ಷಗಳಾಗಿರುವುದರಿಂದ ಹಾಗೂ ಇವರು ಎಲ್.ಎಲ್.ಎಂ (ಪ್ರಥಮ ದರ್ಜೆಯಲ್ಲಿ ಉತ್ತೀರ್ಣ), ಎಂ.ಫಿ.ಲ್, ಪಿ.ಹೆಚ್.ಡಿ. ಪದವಿ ಹಾಗೂ ಎನ್.ಇ.ಟಿ. ವಿದ್ಯಾರ್ಹತೆಯನ್ನು ಹೊಂದಿದ್ದು, ಇವರನ್ನು ಸಹಾಯಕ ಪ್ರಾಧ್ಯಾಪಕರ ಹುದ್ದೆಯಲ್ಲಿ ವೇತನಾನುದಾನಕ್ಕೆ ಒಳಪಡಿಸಬಹುದೆಂದು ಕಾಲೇಜು ಶಿಕ್ಷಣ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ.

ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ ಈ ಕಾಲೇಜು ಇಲ್ಲಿ ಲಭ್ಯವಿರುವ ಕಾರ್ಯಭಾರಕ್ಕನುಗುಣವಾಗಿ 08 ಬೋಧಕ ಸಿಬ್ಬಂದಿಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಲಾ 40 ಕೆಎಲ್ ಎಂ 2013, ದಿನಾಂಕ:26.08.2015ರಲ್ಲಿ 01–ಪ್ರಾಂಶುಪಾಲರು, 02–ಸಹಾಯಕ ಪ್ರಾಧ್ಯಾಪಕರು, 01–ಗ್ರಂಥಪಾಲಕರು ಹಾಗೂ 01–ದೈಹಿಕ ಶಿಕ್ಷಕ ಬೋಧಕರನ್ನು ಭರ್ತಿಮಾಡಲಾಗಿದೆ. 03–ಸಹಾಯಕ ಪ್ರಾಧ್ಯಾಪಕರು ಹುದ್ದೆಗಳು ಖಾಲಿ ಇದ್ದು, 01–ಎಸ್‌ಟಿ ಮತ್ತು 01–ಎಸ್‌ಸಿ ಹಾಗೂ 01–ಜಿಎಂ ಹುದ್ದೆಗಳಾಗಿವೆ.

ಡಾ॥ ಸವಿತಾ ಎಲ್.ಪಾಟೀಲ್, ಸಹಾಯಕ ಪ್ರಾಧ್ಯಾಪಕರು ಇವರು 3ಬಿ ವರ್ಗಕ್ಕೆ ಸೇರಿದ್ದು, ಹುರಕಡ್ಲಿ ಕಾನೂನು ಕಾಲೇಜಿನಲ್ಲಿ ಖಾಲಿ ಇರುವ ಸಹಾಯಕ ಪ್ರಾಧ್ಯಾಪಕ–ಸಾಮಾನ್ಯ ಅಭ್ಯರ್ಥಿ ಹುದ್ದೆಗೆ ಎದುರಾಗಿ ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 40 ಕೆಎಲ್‌ಎಮ್ 2013, ಬೆಂಗಳೂರು, ದಿನಾಂಕ: 08.03.2016.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಈ ಸಂಸ್ಥೆಯ ಧಾರವಾಡ ಬೋಧಕ ಹುದ್ದೆಗಳಲ್ಲಿ ಸಾಮಾನ್ಯ ಅಭ್ಯರ್ಥಿ–01 ಖಾಲಿ ಇದ್ದು, ಡಾ॥ ಸವಿತಾ.ಎಲ್.ಪಾಟೀಲ್, ಇವರನ್ನು ಈ ಕೆಳಕಂಡ ಷರತ್ತುಗಳೊಂದಿಗೆ ವೇತನಾನುದಾನಕ್ಕೆ ಒಳಪಡಿಸಲಾಗಿದೆ.

| ಕ್ರ.ಸಂ | ಹೆಸರು | ಹುದ್ದೆ | ಮೀಸಲಾತಿ | ಸೇವೆಗೆ ಸೇರಿದ ದಿನಾಂಕ | ವೇತನ ಶ್ರೇಣಿ |
|---|---|---|---|---|---|
| 1. | ಡಾ॥ ಸವಿತಾ ಎಲ್. ಪಾಟೀಲ್ | ಸಹಾಯಕ ಪ್ರಾಧ್ಯಾಪಕರು | 3ಬಿ | 17.12.2012 | ಯು.ಜಿ.ಸಿ ವೇತನ ಶ್ರೇಣಿ (M.Phil/Ph.D/NET ವಿದ್ಯಾರ್ಹತೆ ಹೊಂದಿರುತ್ತಾರೆ.) |

**ಷರತ್ತುಗಳು :**

1) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಹುದ್ದೆಗಳನ್ನು ಈ ಆದೇಶದ ದಿನಾಂಕದಿಂದ 6 (ಆರು) ತಿಂಗಳೊಳಗಾಗಿ ಭರ್ತಿ ಮಾಡತಕ್ಕದ್ದು, ತಪ್ಪಿದಲ್ಲಿ ನೀಡಲಾಗಿರುವ ವೇತನಾನುದಾನವು ರದ್ದುಗೊಳ್ಳುತ್ತದೆ.
2) ಹಿಂದುಳಿದ ವರ್ಗಗಳ ಪ್ರಾತಿನಿಧ್ಯದಲ್ಲಿ ಮೀಸಲಾತಿ ಕೊರತೆಯನ್ನು ಭವಿಷ್ಯತ್ತಿನಲ್ಲಿ ತೆರವಾಗುವ ಎಲ್ಲಾ ಹುದ್ದೆಗಳನ್ನು ಮೀಸಲಾತಿ ಕೊರತೆ ಸರಿದೂಗುವವರೆಗೆ ಸಂಬಂಧಪಟ್ಟ ಮೀಸಲಾತಿ ಅಭ್ಯರ್ಥಿಗಳಿಂದಲೇ ಕಡ್ಡಾಯವಾಗಿ ನೇಮಕಾತಿ ಮಾಡಿಕೊಳ್ಳತಕ್ಕದ್ದು.
3) ಈ ಕಾಲೇಜಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳ ಶೈಕ್ಷಣಿಕ ಅರ್ಹತೆಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿ/ಪ್ರಮಾಣ ಪತ್ರಗಳ ಸತ್ಯಾಸತ್ಯತೆಯನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ದೃಢೀಕರಿಸಿಕೊಂಡ ನಂತರವೇ ವೇತನ ಪಾವತಿಗೆ ಕ್ರಮಕೈಗೊಳ್ಳುವುದು.
4) ಈ ಆದೇಶದನ್ವಯ ವೇತನಾನುದಾನಕ್ಕೆ ಒಳಪಟ್ಟಿರುವ ಬೋಧಕ ಹಾಗೂ ಬೋಧಕೇತರರ ಸಿಬ್ಬಂದಿಗಳಿಗೆ ವೇತನ ಬಿಡುಗಡೆ ಮಾಡುವ ಮುನ್ನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ಅಡಿಯಲ್ಲಿ ನೇಮಕಾತಿ ಹೊಂದಿದ್ದಲ್ಲಿ ಅಂತಹ ಸಿಬ್ಬಂದಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಖಚಿತಪಡಿಸಿಕೊಳ್ಳತಕ್ಕದ್ದು.
5) ಹುದ್ದೆ ಅನುಮೋದನೆಗೊಂಡಿರುವ ಸಿಬ್ಬಂದಿಯು ಯಾವುದೇ ಹಂತದಲ್ಲಿ ತಮ್ಮ ಹೇಳಿಕೆ/ಅಸತ್ಯವಾದ ಮಾಹಿತಿಯನ್ನು ಒದಗಿಸಿದಲ್ಲಿ ಅಂತಹ ನೇಮಕಾತಿಯನ್ನು ರದ್ದುಪಡಿಸಲಾಗುವುದು.
6) ಸಿಬ್ಬಂದಿಗಳ ವೇತನಾನುದಾನವು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.
7) ದಿನಾಂಕ: 24.12.1998ಕ್ಕಿಂತ ಹಿಂದೆ ನೇಮಕವಾದ ಉಪನ್ಯಾಸಕರುಗಳು ಸೇವಾ ವಿಚ್ಛಿನ್ನತೆಯನ್ನು ಹೊಂದಿರಬಾರದು.

8) ಮುಂದೆ ತುಂಬಲಾಗುವ ಹುದ್ದೆಗಳಿಗೆ ಸಂಬಂಧಿಸಿದ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.

9) ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯವರು ಅನುದಾನ ರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧನಾಗಿರುತ್ತೇನೆಂದು ₹. 50/– ಛಾಪಾ ಕಾಗದದಲ್ಲಿ ಮುಚ್ಚಳಿಕೆ ಪತ್ರವನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಬರೆಯಿಸಿಕೊಳ್ಳತಕ್ಕದ್ದು.

10) ಮೇಲಿನ ಆದೇಶದನ್ವಯ ಈ ಕಾಲೇಜಿಗೆ ಸಂಬಂಧಿಸಿದಂತೆ ನೇಮಕವಾಗಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳಿಗೆ ವೇತನಾನುದಾನವನ್ನು ಬಿಡುಗಡೆ ಮಾಡುವ ಮುನ್ನ ನ್ಯಾಯಾಲಯದಲ್ಲಿ ಯಾವುದೇ ವಿಧವಾದ ವ್ಯಾಜ್ಯ/ವಿವಾದ ಬಾಕಿ ಇರುವುದಿಲ್ಲ ಎಂಬುದನ್ನು ಸಂಬಂಧಿಸಿದ ಪ್ರಾದೇಶಿಕ ಜಂಟಿ ನಿರ್ದೇಶಕರು ಖಚಿತಪಡಿಸಿಕೊಳ್ಳತಕ್ಕದ್ದು.

11) ಸದರಿ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಡಿಸಿರುವ ಸಿಬ್ಬಂದಿಗಳನ್ನು ಹೆಚ್.ಆರ್.ಎಂ.ಎಸ್.ನಲ್ಲಿ ಅಳವಡಿಸಲು ಅಗತ್ಯ ಕ್ರಮ ಕೈಗೊಳ್ಳುವುದು.

12) ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾಗುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ನೇಮಕಾತಿಗಾಗಿ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯುವುದು.

13) ಸಂಬಂಧಪಟ್ಟ ಜಂಟಿ ನಿರ್ದೇಶಕರು ಪ್ರತಿ ವರ್ಷವು ವೇತನಾನುದಾನಕ್ಕೆ ಒಳಪಟ್ಟಿರುವ ಕಾಲೇಜಿನ ಆಡಳಿತ ಮಂಡಳಿಯು ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವುದನ್ನು ದೃಢೀಕರಿಸಿದ ನಂತರವೇ ಆಯುಕ್ತಾಲಯದಿಂದ ಅನುದಾನ ಬಿಡುಗಡೆ ಮಾಡತಕ್ಕದ್ದು.

14) ವೇತನಾನುದಾನ ಬಿಡುಗಡೆಗೆ ಸಂಬಂಧಿಸಿದಂತೆ ಯಾವುದೇ ನ್ಯೂನತೆಗಳು ಉಂಟಾದಲ್ಲಿ ಸಂಬಂಧಪಟ್ಟ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆಯರವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಮೇಲೆ ಅನುದಾನಕ್ಕೆ ಒಳಪಡಿಸಿರುವ ಹುರಕಡ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ ವೇತನಾನುದಾನದ ವೆಚ್ಚವನ್ನು ಕಾನೂನು ಇಲಾಖೆಯ ಲೆಕ್ಕ ಶೀರ್ಷಿಕೆ ಸಂಖ್ಯೆ:2014–00–105–0–15 Private Aided Law Colleges-101-Grant-in aid Schemes (Plan) ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 57 ವೆಚ್ಚ–10/2016, ದಿನಾಂಕ: 01.03.2016ರ ಸಹಮತಿಯನ್ವಯ ಹೊರಡಿಸಲಾಗಿದೆ.

**PR. 498**

**SC. 100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಸ್. ಸುಧಾಮಣಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ. (ಮಾನವ ಹಕ್ಕುಗಳು)

## ಕಾನೂನು ಸಚಿವಾಲಯ

### ತಿದ್ದೋಲೆ

### ಸಂಖ್ಯೆ: ಲಾ 34 ಕೆಎಲ್ಎಂ 2013, ಬೆಂಗಳೂರು, ದಿನಾಂಕ: 05–07–2016.

ಸರ್ಕಾರದ ಆದೇಶ ಸಂಖ್ಯೆ: ಲಾ 34 ಕೆಎಲ್ಎಂ 2013, ದಿನಾಂಕ: 16.04.2015ರ ಪ್ರಸ್ತಾವನೆ ಭಾಗದ ಪ್ಯಾರಾ 5 ರಲ್ಲಿ **"ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ಸಹಾಯಕ ಪ್ರಾಧ್ಯಾಪಕರುಗಳಾದ ಶ್ರೀ ಜೆ.ಸಿ. ರಾಜಣ್ಣ, ಶ್ರೀ ಮಹೇಶ್ ಬಿ.ಪಿ., ಶ್ರೀಮತಿ ಸುಧಾಮಣಿ ಪಿ.ಎಂ., ಶ್ರೀ ನಾಗೇಂದ್ರಮೂರ್ತಿ ಎಂ.ಪಿ. ಇವರುಗಳು ನಿಗಧಿತ ವಿದ್ಯಾರ್ಹತೆ ಹೊಂದಿಲ್ಲದೆ ಇರುವುದರಿಂದ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ತಿಳಿಸಿರುತ್ತಾರೆ."** ಎಂಬುದರ ಬದಲಾಗಿ.

**"ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ಸಹಾಯಕ ಪ್ರಾಧ್ಯಾಪಕರುಗಳಾದ ಶ್ರೀ ಜೆ.ಸಿ. ರಾಜಣ್ಣ, ಶ್ರೀ ಮಹೇಶ್ ಬಿ.ಪಿ., ಶ್ರೀಮತಿ ಸುಧಾಮಣಿ ಪಿ.ಎಂ., ಇವರುಗಳು ನಿಗಧಿತ ವಿದ್ಯಾರ್ಹತೆ ಹೊಂದಿಲ್ಲದೆ ಇರುವುದರಿಂದ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ಹಾಗೂ ಶ್ರೀ ನಾಗೇಂದ್ರಮೂರ್ತಿ ಎಂ.ಪಿ. ಇವರು ಯುಜಿಸಿ ವೇತನ ಶ್ರೇಣಿಗೆ ಅರ್ಹರಿಲ್ಲವೆಂದು ತಿಳಿಸಿರುತ್ತಾರೆ."** ಎಂದು ಓದಿಕೊಳ್ಳತಕ್ಕದ್ದು.

ಉಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

**PR. 499**

**SC. 100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಸ್. ಸುಧಾಮಣಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ. (ಮಾನವ ಹಕ್ಕುಗಳು)

## ಕಾನೂನು ಸಚಿವಾಲಯ

### ತಿದ್ದೋಲೆ

### ಸಂಖ್ಯೆ: ಲಾ 54 ಕೆಎಲ್ಎಂ 2013, ಬೆಂಗಳೂರು, ದಿನಾಂಕ: 05–07–2016.

ಸರ್ಕಾರಿ ಆದೇಶ ಸಂಖ್ಯೆ: ಲಾ 54 ಕೆಎಲ್ಎಂ 2013, ದಿನಾಂಕ: 12.04.2015ರ ಪ್ರಸ್ತಾವನೆ ಭಾಗದ ಪ್ಯಾರಾ 5 ರಲ್ಲಿ **"ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ಶ್ರೀ ಕೆ.ಎಸ್.ಮಂಜುನಾಥ, ದೈ.ಶಿ.ಭೋ., ಶ್ರೀಮತಿ ಎಸ್.ಭಾರತಿ, ಸಹಾಯಕ ಪ್ರಾಧ್ಯಾಪಕರು ಹಾಗೂ ಶ್ರೀ ಜಿ.ಚಂದ್ರಶೇಖರ್, ಗ್ರಂಥಪಾಲಕರು ಇವರುಗಳು ನಿಗಧಿತ ವಿದ್ಯಾರ್ಹತೆ ಹೊಂದಿಲ್ಲದೆ ಇರುವುದರಿಂದ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ತಿಳಿಸಿರುತ್ತಾರೆ."** ಎಂಬುದರ ಬದಲಾಗಿ.

**"ಮೇಲೆ ಓದಲಾದ (4)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಇವರು ಶ್ರೀ ಕೆ.ಎಸ್.ಮಂಜುನಾಥ, ದೈ.ಶಿ.ಭೋ., ಇವರು ನಿಗಧಿತ ವಿದ್ಯಾರ್ಹತೆ ಹೊಂದಿಲ್ಲದೆ ಇರುವುದರಿಂದ ಇವರನ್ನು ವೇತನಾನುದಾನಕ್ಕೆ ಒಳಪಡಿಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ಹಾಗೂ ಶ್ರೀಮತಿ ಎಸ್.ಭಾರತಿ, ಸಹಾಯಕ ಪ್ರಾಧ್ಯಾಪಕರು ಹಾಗೂ ಶ್ರೀ ಜಿ.ಚಂದ್ರಶೇಖರ್, ಗ್ರಂಥಪಾಲಕರು ಇವರುಗಳು ಯುಜಿಸಿ ವೇತನ ಶ್ರೇಣಿಗೆ ಅರ್ಹರಿಲ್ಲವೆಂದು ತಿಳಿಸಿರುತ್ತಾರೆ."** ಎಂದು ಓದಿಕೊಳ್ಳತಕ್ಕದ್ದು.

ಉಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

**PR. 500**
**SC. 100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಸ್. ಸುಧಾಮಣಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ. (ಮಾನವ ಹಕ್ಕುಗಳು)

## LAW SECRETARIAT

### NOTIFICATION

### NO.:Law 01 KLM 2016, BENGALURU, DATED: 04TH JULY, 2016.

In exercise of the powers conferred under sub-section(1) of Section 14 of the Karnataka State Law University Act, 2009, Government of Karnataka hereby constitute the Search Committee for suggestion a panel of names for selection of Vice-Chancellor, Karnataka State Law University, Hubballi with the following Members.

| | | |
|---|---|---|
| 1. | Dr. Vimal Ramniklal Parmar<br>"KESHAV" 47, Maa Gayatri Nagar,<br>Near Setu Health Club, Bamroli Road, Godhra-389001. | Chairman |
| 2. | Prof. (Dr.) Paramjit. S. Jaswal,<br>Vice-Chancellor, R.G.National University of Law,<br>Patiala-147006. | Member |
| 3. | Prof. S.N. Hegde, M.Sc. Ph.D.<br>Former Vice-Chancellor, No:2437, "Vidvath", Vijayanagar II Stage, Mysuru-570017. | Member |
| 4. | Prof.V.B. Coutinho, Former Vice-Chancellor The Kalaburagi Univeristy Flat No.202, Serene Manor, 26/5, Wheeler Road, Extn, Bengaluru-560084 | Member |

The Principal Secretary to Government, Department of Law shall be the Convenor of the Search Committee.

The Search Committee shall recommend to Government the panel of three persons of eminent educationists in alphabetical order, for submission to the Chancellor for Selection one of them as Vice-Chancellor, Karnataka State Law university, Hubballi.

**PR. 501**
**SC. 20**

By Order and in the name of the Governor of Karnataka,
**C.S.Sudhamani,**
Under Secretary to Government,
Law Department. ( Human Rights)

## ಕಂದಾಯ ಸಚಿವಾಲಯ

**ವಿಷಯ :** ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಗೆ ಒಳಪಡುವ ದೇವಾಲಯಗಳಲ್ಲಿ ಪಾದರಕ್ಷೆ ಕಾಯ್ದುಕೊಳ್ಳುವ ಗುತ್ತಿಗೆಯನ್ನು ಇ–ಪ್ರಕ್ಯೂರ್‌ಮೆಂಟ್‌ನಲ್ಲಿ ನಡೆಸುವುದಕ್ಕೆ ವಿನಾಯಿತಿ ನೀಡುವ ಕುರಿತು.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ:ಎಡಿಎಂ/11/ಇತರೆ/ಸಿಆರ್/527/2014–15, ದಿನಾಂಕ:12.01.2016.

**ಪ್ರಸ್ತಾವನೆ:–**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ದಿನಾಂಕ:12.01.2016ರ ಪತ್ರದಲ್ಲಿ ಮುಜರಾಯಿ ಇಲಾಖೆಗೆ ಒಳಪಟ್ಟ ದೇವಾಲಯಗಳಲ್ಲಿ ಪಾದರಕ್ಷೆಗಳನ್ನು ಕಾಯ್ದುಕೊಳ್ಳುವ ಗುತ್ತಿಗೆಯನ್ನು ನೀಡುವ ಕುರಿತು ಹರಾಜಿನಲ್ಲಿ ಭಾಗವಹಿಸುವ ಗುತ್ತಿಗೆದಾರರು ಅನಕ್ಷರಸ್ಥರಾಗಿದ್ದು, ಇವರಿಗೆ ಇ–ಪ್ರಕ್ಯೂರ್‌ಮೆಂಟ್‌ನಲ್ಲಿ ಟೆಂಡರ್ ಸಲ್ಲಿಸುವ ಕಾರ್ಯವಿಧಾನ ತಿಳಿದಿರುವುದಿಲ್ಲ. ಇದಲ್ಲದೇ, ಮುಜರಾಯಿ ದೇವಾಲಯಗಳಲ್ಲಿ ವೈಖಾನಾಸಾಗಮ, ಶೈವಾಗಮ ಮತ್ತು ಪಾಂಚರಾತ್ರಾಗಮ ಶಾಸ್ತ್ರವನ್ನು ಅನುಸರಿಸಿ ನಿತ್ಯ ಮತ್ತು ವಿಶೇಷ ದಿನಗಳಲ್ಲಿ ಶಾಸ್ತ್ರೋಕ್ತವಾಗಿ ನಡೆಸಲು ಬೇಕಾಗುವ ಪೂಜಾ ಸಾಮಾಗ್ರಿಗಳು, ಅಲಂಕಾರಕ್ಕೆ ಬೇಕಾಗಿರುವ ಹೂ, ಅಡುಗೆ ತಯಾರಿಗಾಗಿ ತರಕಾರಿ, ಚಪ್ಪಲಿ ಹರಾಜು, ಬಾಳೆಹಣ್ಣು, ಈಡುಗಾಯಿ, ಆನೆ ಮತ್ತು ಇತರೆ ದೇವಾಲಯದ ಪ್ರಾಣಿಗಳನ್ನು ಸಾಕಲು ಬೇಕಾಗಿರುವ ಸಾಮಗ್ರಿಗಳು ಇತ್ಯಾದಿಗಳನ್ನು ಇ–ಪ್ರಕ್ಯೂರ್‌ಮೆಂಟ್‌ನಿಂದ ಖರೀದಿಸಲು ಕಷ್ಟಸಾಧ್ಯವಾಗಿರುತ್ತದೆ. ಮೇಲ್ಕಂಡ ಸಾಮಗ್ರಿಗಳು ಕಡಿಮೆ ಮೊತ್ತದ ಹರಾಜಾಗಿದ್ದು ಇವುಗಳನ್ನು ನಿರ್ವಹಿಸುವ ಗುತ್ತಿಗೆದಾರರು ಅನಕ್ಷರಸ್ಥರಾಗಿದ್ದು, ಇ–ಪ್ರಕ್ಯೂರ್‌ಮೆಂಟ್ ಜ್ಞಾನವಿಲ್ಲದ ಕಾರಣ ಸದರಿ ಸಾಮಗ್ರಿಗಳಿಗೆ ಇ–ಪ್ರಕ್ಯೂರ್‌ಮೆಂಟ್ ಪ್ರಕ್ರಿಯೆಯಿಂದ ವಿನಾಯಿತಿ ನೀಡಿ, ಬಹಿರಂಗವಾಗಿ ಟೆಂಡರ್–ಕಂ–ಹರಾಜು ಮೂಲಕ ನಡೆಸಲು ಅನುಮತಿ ನೀಡುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಕೋರಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 03 ಮುಆಬಿ 2016, ಬೆಂಗಳೂರು, ದಿನಾಂಕ: 17ನೇ ಮೇ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಗೆ ಒಳಪಡುವ ದೇವಾಲಯಗಳಲ್ಲಿ ಪಾದರಕ್ಷೆ ಕಾಯ್ದುಕೊಳ್ಳುವ ಗುತ್ತಿಗೆಯ ಹಕ್ಕನ್ನು ಇದೊಂದು **"ವಿಶೇಷ ಪ್ರಕರಣ"** ವೆಂದು ಪರಿಗಣಿಸಿ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4ಜಿ ಅಡಿಯಲ್ಲಿ ಇ–ಪ್ರಕ್ಯೂರ್‌ಮೆಂಟ್‌ನಲ್ಲಿ ಟೆಂಡರ್ ಕರೆಯುವುದಕ್ಕೆ ವಿನಾಯಿತಿ ನೀಡಿದೆ. ಸದರಿ ಗುತ್ತಿಗೆಯನ್ನು ಬಹಿರಂಗ ಹರಾಜು ಮೂಲಕ ಕ್ರಮ ಕೈಗೊಳ್ಳಲು ಹಾಗೂ ಕೆಟಿಪಿಪಿ ಕಾಯ್ದೆಯ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 198 ವೆಚ್ಚ–12/2016, ದಿನಾಂಕ:18.03.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿರುತ್ತದೆ.

**PR. 502**

**SC. 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್.ನಾಗರತ್ನಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಮುಜರಾಯಿ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿ ಪ್ರಾಜೆಕ್ಟ್ ಇಂಜಿನಿಯರ್ಸ್ (ಜೂನಿಯರ್ ಇಂಜಿನಿಯರ್ಸ್) ಆಫ್ ರೂರಲ್ ಎನರ್ಜಿ ಪ್ರೋಗ್ರಾಮ್ಸ್ ರವರುಗಳ ಸೇವೆಯನ್ನು ಉಪಯೋಗಿಸಿಕೊಳ್ಳುವ ಕುರಿತು.

**ಪ್ರಸ್ತಾವನೆ :–**

ರಾಜ್ಯದಲ್ಲಿ ಕೇಂದ್ರ ಪುರಸ್ಕೃತ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಎಲ್ಲಾ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಪ್ರಸಕ್ತ ಸಾಲಿನಲ್ಲಿ ರಾಜ್ಯವು ತೀವ್ರ ಬರಗಾಲವನ್ನು ಅನುಭವಿಸುತ್ತಿದೆ. ಈ ಹಿನ್ನೆಲೆಯಲ್ಲಿ, ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಜನರಿಗೆ ಉದ್ಯೋಗಗಳನ್ನು ನೀಡುವುದರ ಜೊತೆಗೆ ಬಹುಬಾಳಿಕೆ ಬರುವ ನೈಸರ್ಗಿಕ ಸಂಪನ್ಮೂಲಗಳನ್ನು ಬಲಪಡಿಸುವಂತಹ ಕಾಮಗಾರಿಗಳನ್ನು ಅನುಷ್ಠಾನ ಮಾಡಲಾಗುತ್ತಿದೆ. ಈ ನಿಟ್ಟಿನಲ್ಲಿ ಸಮರೋಪಾದಿಯಲ್ಲಿ ಕೆಲಸಗಳನ್ನು ಪ್ರಾರಂಭಿಸಲಾಗಿದೆ. ಈಗಾಗಲೇ ಪಂಚಾಯತ್ ರಾಜ್ ಇಂಜಿನಿಯರಿಂಗ್ ಅಧಿಕಾರಿಗಳು, ಅನುಷ್ಠಾನ ಇಲಾಖೆ ಅಧಿಕಾರಿಗಳು, ಹೊರಗುತ್ತಿಗೆ ಆಧಾರಿತ ತಾಂತ್ರಿಕ ಸಂಯೋಜಕರು ಹಾಗೂ ತಾಂತ್ರಿಕ ಸಹಾಯಕ ಇಂಜಿನಿಯರ್‌ಗಳು ಕಾಮಗಾರಿಗಳನ್ನು ನಿರ್ವಹಿಸುತ್ತಿದ್ದಾರೆ.

ಆದರೆ, ಜಿಲ್ಲಾ ಹಂತದಲ್ಲಿ ತಾಂತ್ರಿಕ ಸಿಬ್ಬಂದಿ ಸೇವೆಯ ಅವಶ್ಯಕತೆ ಇರುವ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ಲಭ್ಯವಿರುವ ಪ್ರಾಜೆಕ್ಟ್ ಇಂಜಿನಿಯರ್ಸ್ (ಜೂನಿಯರ್ ಇಂಜಿನಿಯರ್ಸ್)ಆಫ್ ರೂರಲ್ ಎನರ್ಜಿ ಪ್ರೋಗ್ರಾಮ್ಸ್ ರವರುಗಳ ಸೇವೆಯನ್ನು ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾಮಗಾರಿಗಳ ಅನುಷ್ಠಾನಕ್ಕೆ ಬಳಸಿಕೊಳ್ಳಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ: 428: 2016, ಬೆಂಗಳೂರು, ದಿನಾಂಕ: 16–05–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ತೀವ್ರವಾಗಿ ಮತ್ತು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕಾಗಿರುವುದರಿಂದ ಇರುವ ತಾಂತ್ರಿಕ ಸಿಬ್ಬಂದಿಗಳ ಜೊತೆಗೆ, ಅನುಬಂಧಿತ ಜಿಲ್ಲೆಗಳಲ್ಲಿ ಲಭ್ಯವಿರುವ ಪ್ರಾಜೆಕ್ಟ್ ಇಂಜಿನಿಯರ್ಸ್ (ಜೂನಿಯರ್ ಇಂಜಿನಿಯರ್ಸ್)ಆಫ್ ರೂರಲ್ ಎನರ್ಜಿ ಪ್ರೋಗ್ರಾಮ್ಸ್ ರವರುಗಳ ಸೇವೆಯನ್ನು ಸಹ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಕಾಮಗಾರಿ ಅನುಷ್ಠಾನವನ್ನು ತಮ್ಮ ಮೂಲ ಕರ್ತವ್ಯಗಳೊಂದಿಗೆ ನಿರ್ವಹಿಸಲು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದೇಶ್ ಪೋತಲಕಟ್ಟಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ: 428: 2016, ಬೆಂಗಳೂರು, ದಿನಾಂಕ: 11–05–2016.**

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿ ಪ್ರಾಜೆಕ್ಟ್ ಇಂಜಿನಿಯರ್ಸ್ (ಜೂನಿಯರ್ ಇಂಜಿನಿಯರ್ಸ್) ಆಫ್ ರೂರಲ್ ಎನರ್ಜಿ ಪ್ರೋಗ್ರಾಮ್ಸ್ ರವರುಗಳ ಸೇವೆಯನ್ನು ಉಪಯೋಗಿಸಿಕೊಳ್ಳುವ ವಿವರಗಳ ತಃಖ್ತೆ.

| ಕ್ರಸಂ | ಜಿಲ್ಲೆಯ ಹೆಸರು | ಪ್ರಾಜೆಕ್ಟ್ ಇಂಜಿನಿಯರ್ಸ್‌ಗಳ (ಜೂನಿಯರ್ ಇಂಜಿನಿಯರ್ಸ್) ಭರ್ತಿ ಹುದ್ದೆ & ಖಾಲಿ ಹುದ್ದೆ |
|---|---|---|
| **1** | **ಬಾಗಲಕೋಟೆ** | **ಖಾಲಿ ಹುದ್ದೆ** |
| 2 | ಬೆಂಗಳೂರು(ಗ್ರಾ) | ಸುದರ್ಶನ |
| 3 | ಬೆಂಗಳೂರು(ನಗರ) | ಶಿವಣ್ಣ |
| 4 | ಬೆಳಗಾವಿ | ಶಿವಾನಂದ ಕಮಟಗಿ |
| 5 | ಬಳ್ಳಾರಿ | ಜಿ.ಎಲ್.ಬಾಬಿ |

| ಕ್ರಸಂ | ಜಿಲ್ಲೆಯ ಹೆಸರು | ಪ್ರಾಜೆಕ್ಟ್ ಇಂಜಿನಿಯರ್‌ಗಳ (ಜೂನಿಯರ್ ಇಂಜಿನಿಯರ್ಸ್) ಭರ್ತಿ ಹುದ್ದೆ & ಖಾಲಿ ಹುದ್ದೆ |
|---|---|---|
| 6 | ಬೀದರ್ | ವೀರಣ್ಣ |
| 7 | ವಿಜಯಪುರ | ಮಾರ್ಕಂಡಯ |
| **8** | **ಚಾಮರಾಜನಗರ** | **ಖಾಲಿ ಹುದ್ದೆ** |
| 9 | ಚಿಕ್ಕಮಗಳೂರು | ಜಯ ಕುಮಾರ್ |
| 10 | ಚಿಕ್ಕಬಳ್ಳಾಪುರ | ಮರುಳ ಸಿದ್ದೇಶ್ವರ |
| 11 | ಚಿತ್ರದುರ್ಗ | ಶೇಯ್ಕ್ ಅಹಮದ್(ಅಮಾನತ್ತು) |
| **12** | **ದಕ್ಷಿಣ ಕನ್ನಡ** | **ಖಾಲಿ ಹುದ್ದೆ** |
| 13 | ದಾವಣಗೆರೆ | ಬಸವರಾಜಪ್ಪ |
| **14** | **ಧಾರವಾಡ** | **ಖಾಲಿ ಹುದ್ದೆ** |
| **15** | **ಗದಗ** | **ಖಾಲಿ ಹುದ್ದೆ** |
| **16** | **ಕಲಬುರ್ಗಿ** | **ಖಾಲಿ ಹುದ್ದೆ** |
| 17 | ಹಾಸನ | ದತ್ತಾತ್ರಿ |
| 18 | ಹಾವೇರಿ | ಉತ್ತಮ ಕುಮಾರ್ |
| 19 | ಕೊಡಗು | ನಾಗೇಶ್ |
| **20** | **ಕೋಲಾರ** | **ಖಾಲಿ ಹುದ್ದೆ** |
| **21** | **ಕೊಪ್ಪಳ** | **ಖಾಲಿ ಹುದ್ದೆ** |
| 22 | ಮಂಡ್ಯ | ಬಸವರಾಜ್ ಯಲಬುರ್ಗಿ |
| 23 | ಮೈಸೂರು | ಮುರ್ತಾಜ ಅಲಿ |
| 24 | ರಾಮನಗರ | ನಂಜುಂಡೇಗೌಡ |
| 25 | ರಾಯಚೂರು | ಎಸ್.ಪಿ.ಪಾಟಿಲ್ |
| 26 | ಶಿವಮೊಗ್ಗ | ಎಂ.ಹೆಚ್.ಭಾಸ್ಕರ್ (ಅಮಾನತ್ತು) |
| 27 | ತುಮಕೂರು | ಶ್ರೀನಿವಾಸ್ |
| **28** | **ಉಡುಪಿ** | **ಖಾಲಿ ಹುದ್ದೆ** |
| 29 | ಉತ್ತರ ಕನ್ನಡ | ಕೃಷ್ಣ |
| **30** | **ಯಾದಗಿರಿ** | **ಖಾಲಿ ಹುದ್ದೆ** |

**PR. 503**

**ಸಿದ್ದೇಶ್ ಪೋತಲಕಟ್ಟಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮೊದಲ ಬಾರಿಗೆ ಬೆಂಗಳೂರು ನಗರದ ಮಾನವ ಅಭಿವೃದ್ಧಿ ವರದಿಯನ್ನು 2016–17ರಲ್ಲಿ ಸಿದ್ದಪಡಿಸುವ ಬಗ್ಗೆ.

**ಓದಲಾಗಿದೆ:** ಸನ್ಮಾನ್ಯ ಮುಖ್ಯಮಂತ್ರಿಗಳು 2016–17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ.

**ಪ್ರಸ್ತಾವನೆ :–**

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯು ಈಗಾಗಲೇ ರಾಜ್ಯ/ಜಿಲ್ಲಾ ಮಾನವ ಅಭಿವೃದ್ಧಿ ವರದಿಗಳನ್ನು ಹೊರತಂದಿದ್ದು, ಸದರಿ ವಿಷಯದಲ್ಲಿ ಪರಿಣಿತಿ ಹೊಂದಿರುವುದು ಗಮನಾರ್ಹ ಅಂಶವಾಗಿರುತ್ತದೆ.

ಈ ಹಿನ್ನೆಲೆಯಲ್ಲಿ, ಸನ್ಮಾನ್ಯ ಮುಖ್ಯಮಂತ್ರಿಗಳು 2016–17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮೊದಲ ಬಾರಿಗೆ ಬೆಂಗಳೂರು ನಗರದ ಮಾನವ ಅಭಿವೃದ್ಧಿ ವರದಿಯನ್ನು 2016–17 ರಲ್ಲಿ ಸಿದ್ದಪಡಿಸಲಾಗುವುದು ಎಂದು ಘೋಷಿಸಿದ್ದು, ಮಾನ್ಯ ಮುಖ್ಯಮಂತ್ರಿಗಳು ತೆಗೆದುಕೊಂಡ ನಿರ್ಣಯವನ್ನು ಕಾರ್ಯಗತಗೊಳಿಸುವ ನಿಟ್ಟಿನಲ್ಲಿ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯು ಕ್ರಮ ವಹಿಸಬೇಕಾಗಿರುತ್ತದೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಿಡಿ: 87 ಪಿಎಸ್‌ಡಿ 2016, ಬೆಂಗಳೂರು, ದಿನಾಂಕ: 06-07-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2016–17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಮೊದಲ ಬಾರಿಗೆ ಬೆಂಗಳೂರು ನಗರದ ಮಾನವ ಅಭಿವೃದ್ಧಿ ವರದಿಯನ್ನು 2016–17 ರಲ್ಲಿ ಸಿದ್ದಪಡಿಸಲಾಗುವುದು ಎಂದು ಘೋಷಿಸಿರುವ ನಿರ್ಣಯವನ್ನು ಕಾರ್ಯಗತಗೊಳಿಸುವಂತೆ ಆದೇಶಿಸಿದೆ.

ಸದರಿ ವರದಿಯ ತಯಾರಿಕೆ ಹಾಗೂ ಮುದ್ರಣಕ್ಕೆ ತಗಲುವ ವೆಚ್ಚವನ್ನು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಅಡಿಯಲ್ಲಿ ಬರುವ 2016–17ನೇ ಸಾಲಿನ ಅಧ್ಯಯನ (Studies) ಲೆಕ್ಕಶೀರ್ಷಿಕೆ 3451–00–090–2–26 (ಯೋಜನೆ) 059 (ಇತರೆ ವೆಚ್ಚ) ದಡಿ ಒದಗಿಸಲಾದ ಆಯವ್ಯಯದ ಅನುದಾನದಲ್ಲಿ ಭರಿಸತಕ್ಕದ್ದು.

**PR. 504**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಫೀ ಅಹಮದ್ ಎಂ.ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ–1&2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ :** ರಾಜ್ಯ ಸಿವಿಲ್ ಸೇವೆಯ ಅಧಿಕಾರಿ ಮತ್ತು ನೌಕರರ ಗೃಹ ಮುಂಗಡ ಮಂಜೂರಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಇ 02 ಮಕಮು 2014, ದಿನಾಂಕ: 05.05.2015ನ್ನು ದಿನಾಂಕ:28.05.2015ರ ತಿದ್ದೋಲೆಯೊಂದಿಗೆ ಹೊರಡಿಸಿರುವ ಆದೇಶ.

2) ಮಹಾಲೇಖಪಾಲರ ಪತ್ರ ಸಂಖ್ಯೆ ಜಿಎಂ/ಜಿಇಎನ್ಎನ್/2015–16/71–72, ದಿನಾಂಕ:24.06.2015.

3) ದಿ:28.01.2016ರಂದು ಮಹಾಲೇಖಪಾಲರ ಅಧಿಕಾರಿಗಳೊಂದಿಗೆ ನಡೆದ ಸಭೆಯ ನಡುವಳಿಗಳು.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ರಾಜ್ಯ ಸಿವಿಲ್ ಸೇವೆಯ 'ಎ' ಮತ್ತು 'ಬಿ' ಗುಂಪಿನ ಅಧಿಕಾರಿಗಳಿಗೆ ಗೃಹ ನಿರ್ಮಾಣ/ಖರೀದಿ ಮುಂಗಡವನ್ನು ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಮಹಾಲೇಖಪಾಲರ ಪತ್ರದಲ್ಲಿ ಗೃಹ ನಿರ್ಮಾಣ/ಖರೀದಿ ಮುಂಗಡವನ್ನು ಕ್ರಮ ಸಂಖ್ಯೆ (1)ರ ಆದೇಶದನ್ವಯ ರಾಜ್ಯ ಸಂಚಿತ ನಿಧಿಯಿಂದ ನೀಡಲಾಗುತ್ತಿರುವುದರಿಂದ ಹಾಗೂ ಪತ್ರಾಂಕಿತ ಅಧಿಕಾರಿಗಳ ವೇತನವನ್ನು ಅಧಿಕರಿಸುವ ಪದ್ಧತಿಯಲ್ಲಿ ಒದಲಾವಣೆಯಾಗಿರುವುದರಿಂದ, ಮಹಾಲೇಖಪಾಲರ ಕಛೇರಿಯು ಗೃಹ ನಿರ್ಮಾಣ/ಖರೀದಿ ಮುಂಗಡವನ್ನು ಪಡೆಯಲು ಹಾಗೂ ಬಟವಾಡೆಯನ್ನು ಮಾಡಲು ಕಛೇರಿ ಮುಖ್ಯಸ್ಥರಿಗೆ (ಕಛೇರಿ ಮುಖ್ಯಸ್ಥರೇ ಹಣ ಸೆಳೆಯುವ ಮತ್ತು ಬಡವಾಡೆ ಅಧಿಕಾರಿಯಾಗಿದ್ದ ಪಕ್ಷದಲ್ಲಿ) ಮತ್ತು ಕಛೇರಿ ಮುಖ್ಯಸ್ಥರು ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಯಾಗಿರದ ಪಕ್ಷದಲ್ಲಿ, ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಗೆ ಅಧಿಕರಿಸಿ ಅವರಿಂದ ಸಂಬಂಧಪಟ್ಟ ಪತ್ರಾಂಕಿತ ಅಧಿಕಾರಿಗಳಿಗೆ ನೀಡಬೇಕಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಪೇಯಿಸ್ ರಸೀದಿ ಮೂಲಕ ಅಧಿಕರಿಸುವುದು ಉದ್ಭವಿಸುವುದಿಲ್ಲ ಮತ್ತು ಇದನ್ನು ವೇತನ ಬಿಲ್ ನಮೂನೆಯಲ್ಲಿ ಮಾಡಬೇಕಾಗುತ್ತದೆಯೆಂದು ತಿಳಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಮಹಾಲೇಖಪಾಲರ ಅಧಿಕರಿಸುವಿಕೆ ಇಲ್ಲದೆಯೇ ಅಂತಹ ಪ್ರಾಧಿಕಾರವು ಗೃಹ ನಿರ್ಮಾಣ/ಖರೀದಿ ಮುಂಗಡವನ್ನು ಡ್ರಾ ಮಾಡಿ ಬಟವಾಡೆಯನ್ನು ಮಾಡಬಹುದೆಂದು ಸಲಹೆ ಮಾಡಿರುತ್ತಾರೆ. ಈ ವಿಷಯವನ್ನು ಮೇಲೆ (3) ರಲ್ಲಿ ಓದಲಾದ ಸಭೆಯಲ್ಲಿ ಚರ್ಚಿಸಲಾಯಿತು. ಅದಕ್ಕನುಸಾರವಾಗಿ ಮಹಾಲೇಖಪಾಲರ ಕಛೇರಿಯು ಗೃಹ ನಿರ್ಮಾಣ/ಖರೀದಿ ಮುಂಗಡವನ್ನು ಅಧಿಕಾರಿಗಳಿಗೆ ಅರ್ಹತೆಗನುಗುಣವಾಗಿ ಖಚಿತಪಡಿಸಿಕೊಂಡು ಮಂಜೂರು ಮಾಡುವುದು ಪ್ರಾಧಿಕಾರದ ಜವಾಬ್ದಾರಿಯಾಗಿರುವುದರಿಂದ ಮಹಾಲೇಖಪಾಲರ ಈ ಸಲಹೆಯನ್ನು ಒಪ್ಪಲಾಯಿತು.

ಈ ಸಂಬಂಧ ಲೆಕ್ಕಪತ್ರಗಳ ನಿರ್ವಹಣೆಯನ್ನು ಖಜಾನೆ ನಿರ್ದೇಶಕರು ನಿರ್ವಹಿಸುವುದರಿಂದ ಹಾಗೂ ಸದರಿ ದೀರ್ಘಕಾಲಿಕ ಮುಂಗಡವನ್ನು ರಾಜ್ಯ ಸಂಚಿತ ನಿಧಿಯಿಂದ ಒದಗಿಸುತ್ತಿರುವುದರಿಂದ ಮಹಾಲೇಖಪಾಲರು ಈ ಮುಂಗಡ ಪಡೆದ ಬಗ್ಗೆ ಹಾಗೂ ಅಸಲು ಮತ್ತು ಬಡ್ಡಿ ಮರುಪಾವತಿಯ ಬಗ್ಗೆ ವಿವರವಾದ ಲೆಕ್ಕಪತ್ರಗಳನ್ನು ನಿರ್ವಹಿಸುವುದರಿಂದ ಮಹಾಲೇಖಪಾಲರ ಸಲಹೆಯ ಅನುಸಾರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 02 ಮಕಮು 2014, ಬೆಂಗಳೂರು, ದಿನಾಂಕ: 29.06.2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಮಹಾಲೇಖಪಾಲರ ಕಛೇರಿಯಿಂದ ಪತ್ರಾಂಕಿತ ಅಧಿಕಾರಿಗಳಿಗೆ ಹಾಗೂ ಅಖಿಲ ಭಾರತ ಸೇವಾ ಅಧಿಕಾರಿಗಳಿಗೆ ಗೃಹ ನಿರ್ಮಾಣ/ಖರೀದಿ ಮುಂಗಡವನ್ನು ಡ್ರಾ ಮಾಡಿ ಬಟವಾಡೆ ಮಾಡಲು ಅಧಿಕರಿಸುವ ಪದ್ಧತಿಯನ್ನು ವಿಸರ್ಜಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಗೃಹ ನಿರ್ಮಾಣ/ಖರೀದಿ ಮುಂಗಡವನ್ನು ಪಡೆಯಲು ಹಾಗೂ ಬಟವಾಡೆಯನ್ನು ಮಾಡಲು ಕಛೇರಿ ಮುಖ್ಯಸ್ಥರಿಗೆ (ಕಛೇರಿ ಮುಖ್ಯಸ್ಥರೇ ಹಣ ಸೆಳೆಯುವ ಮತ್ತು ಬಡವಾಡೆ ಅಧಿಕಾರಿಯಾಗಿದ್ದ ಪಕ್ಷದಲ್ಲಿ) ಮತ್ತು ಕಛೇರಿ ಮುಖ್ಯಸ್ಥರು ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಯಾಗಿರದ ಪಕ್ಷದಲ್ಲಿ, ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಗೆ ಅಧಿಕರಿಸಿ, ಅವರಿಂದ ಸಂಬಂಧಪಟ್ಟ ಪತ್ರಾಂಕಿತ ಅಧಿಕಾರಿಗಳಿಗೆ ವೇತನ ಬಿಲ್ ನಮೂನೆಯಲ್ಲಿ ನೀಡಲು ಮಂಜೂರಾತಿಯನ್ನು ನೀಡಲಾಗಿದೆ. ಈ ಸಂಬಂಧ ಈ ಕೆಳಕಂಡ ವಿಧಿವಿಧಾನಗಳನ್ನು ಪಾಲಿಸತಕ್ಕದ್ದು.

1. **ಮಂಜೂರಾತಿ ಪ್ರಾಧಿಕಾರಿಯ ಪಾತ್ರ ಮತ್ತು ಇ–ಆಡಳಿತದ ಜವಾಬ್ದಾರಿ:**

a) ಗೃಹ ನಿರ್ಮಾಣ/ಗೃಹ ಖರೀದಿ ಮುಂಗಡದ ಆದೇಶದ ಪ್ರತಿಯನ್ನು ಮಹಾಲೇಖಪಾಲರ ಕಛೇರಿಗೆ ಕಳುಹಿಸುವಾಗ ಮಹಾಲೇಖಪಾಲರ ಕಛೇರಿಯಲ್ಲಿ ಲೋನ್ಸ್ ಶಾಖೆ ಮತ್ತು ಜಿ.ಇ. ಶಾಖೆಗಳಿಗೆ ಗುರುತಿಸಿ ಕಳುಹಿಸಿ ಸ್ವೀಕೃತಿಯನ್ನು ತಪ್ಪದೇ ಪಡೆಯತಕ್ಕದ್ದು.

b) ಮಂಜೂರಾತಿ ಆದೇಶದ ಪ್ರತಿಯನ್ನು ಹೆಚ್.ಆರ್.ಎಂ.ಎಸ್. ಮತ್ತು ಇ–ಆಡಳಿತ ಶಾಖೆಗೆ ಗುರುತಿಸಿ ಸ್ವೀಕೃತಿ ಪಡೆದು ಕಳುಹಿಸತಕ್ಕದ್ದು ಹಾಗೂ ಈ ಬಗ್ಗೆ ಹೆಚ್.ಆರ್.ಎಂ.ಎಸ್. ಪದ್ಧತಿಯಲ್ಲಿ ಪ್ರತಿಫಲನವಾಗುವುದನ್ನು ಖಾತರಿಪಡಿಸಿಕೊಳ್ಳತಕ್ಕದ್ದು.

2. **ಡ್ರಾಯಿಂಗ್ ಅಧಿಕಾರಿಗಳ ಮತ್ತು ಖಜಾನಾಧಿಕಾರಿಗಳ ಜವಾಬ್ದಾರಿ:**

ಎಲ್.ಪಿ.ಸಿ.ಯನ್ನು ಹೊರಡಿಸುವಾಗ ಗೃಹ ನಿರ್ಮಾಣ/ ಗೃಹ ಖರೀದಿ ಮುಂಗಡ ಸೆಳೆದ ಮೊತ್ತ, ದಿನಾಂಕ, ಬಾಕಿ ಅಸಲು, ಬಡ್ಡಿ ಮರುಪಾವತಿ ಹಾಗೂ ದಂಡಬಡ್ಡಿಯ ಬಾಕಿ ಬಗ್ಗೆ ಸ್ಪಷ್ಟವಾಗಿ ನಮೂದಿಸತಕ್ಕದ್ದು.

3. ಕರ್ನಾಟಕ ಆರ್ಥಿಕ ಸಂಹಿತೆ, 1958ರ ನಿಯಮ 217(2) (ii)ಕ್ಕೆ ಅಗತ್ಯ ತಿದ್ದುಪಡಿಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

**PR. 505**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಶಶಿಧರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ. (ಆಡಳಿತ ಮತ್ತು ಮುಂಗಡ)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** 2015-16ನೇ ಸಾಲಿಗೆ ಶ್ರೀಗಂಧದ ಚಿಲ್ಲರೆ ಮಾರಾಟ ದರಗಳನ್ನು ಪರಿಷ್ಕರಿಸಿ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಅಪಜೀ 11 ಎಫ್ಎಸ್‌ಡಬ್ಲ್ಯೂ 2014, ದಿನಾಂಕ: 21.10.2014.

2) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರು ರವರ ಪತ್ರ ಸಂಖ್ಯೆ: ಬಿ3/ಶ್ರೀಗಂಧ/ಸಿಆರ್-88/2012-13, ದಿನಾಂಕ: 08.03.2016.

**ಪ್ರಸ್ತಾವನೆ :-**

ಮೇಲೆ (2)ರಲ್ಲಿ ಓದಲಾದ ದಿನಾಂಕ: 08.03.2016ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಇವರು ಸರ್ಕಾರದ ಅಧಿಸೂಚನೆ ಸಂಖ್ಯೆ:ಅಪಜೀ 16 ಎಫ್ಎಸ್‌ಡಬ್ಲ್ಯೂ 2001 ರಂತೆ ಕರ್ನಾಟಕ ಅರಣ್ಯ ನಿಯಮ, 1969ರ ನಿಯಮ 99ರ ಉಪ ನಿಯಮ(1)ಬಿ ರ ಪ್ರಕಾರ ಸರ್ಕಾರವು ಪ್ರತಿ ವರ್ಷ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಸಲ್ಲಿಸುವ ಪ್ರಸ್ತಾವನೆಯಂತೆ ಶ್ರೀಗಂಧದ ಚಿಲ್ಲರೆ ಮಾರಾಟ ದರಗಳನ್ನು ಪರಿಷ್ಕರಿಸಿ ನಿಗಧಿಪಡಿಸಬೇಕಾಗಿರುತ್ತದೆ ಎಂದು ಹಾಗೂ ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಅಪಜೀ 11 ಎಫ್ಎಸ್‌ಡಬ್ಲ್ಯೂ, 2014, ದಿನಾಂಕ:21.10.2014ರಲ್ಲಿ ಚಿಲ್ಲರೆ ಮಾರಾಟ ದರಗಳನ್ನು ಮುಂದಿನ ಆದೇಶದವರೆಗೆ ಪರಿಷ್ಕರಿಸಿ ನಿಗಧಿಪಡಿಸಲಾಗಿರುತ್ತದೆ.

ಸದರಿ ಆದೇಶದ ನಂತರ ರಾಜ್ಯದಲ್ಲಿ ನಾಲ್ಕು ಬಹಿರಂಗ ಹರಾಜು ನಡೆದಿದ್ದು, ಅವುಗಳ ಆಧಾರದ ಮೇರೆಗೆ ಶ್ರೀಗಂಧದ ಚಿಲ್ಲರೆ ಮಾರಾಟ ದರವನ್ನು ಪರಿಷ್ಕರಿಸಬಹುದಾಗಿರುತ್ತದೆಂದು ಅಭಿಪ್ರಾಯಪಟ್ಟಿರುತ್ತಾರೆ. 2014-15ನೇ ಸಾಲಿನಲ್ಲಿ ದಿನಾಂಕ: 18.03.2015ರಂದು ಹಾಗೂ ದಿನಾಂಕ:31.08.2015ರಂದು ಮೈಸೂರು ಶ್ರೀಗಂಧದ ಡಿಪೋನಲ್ಲಿ ದಿನಾಂಕ: 23.03.2015ರಂದು ಧಾರವಾಡದ ಶ್ರೀಗಂಧದ ಡಿಪೋನಲ್ಲಿ ಮತ್ತು ದಿನಾಂಕ:20.03.2015ರಂದು ಶಿವಮೊಗ್ಗ ಶ್ರೀಗಂಧದ ಡಿಪೋನಲ್ಲಿ ಶ್ರೀಗಂಧದ ಬಹಿರಂಗ ಹರಾಜುಗಳನ್ನು ನಡೆಸಲಾಗಿದೆ. ಈ ನಾಲ್ಕು ದಿನಾಂಕಗಳಂದು ನಡೆದ ಬಹಿರಂಗ ಹರಾಜಿನಲ್ಲಿ ವಿವಿಧ ದರ್ಜೆಯ ಶ್ರೀಗಂಧಕ್ಕೆ ಬಂದ ಸರಾಸರಿ ದರ ಮತ್ತು ಚಾಲ್ತಿಯಲ್ಲಿರುವ ಚಿಲ್ಲರೆ ಮಾರಾಟ ದರ, ವ್ಯತ್ಯಾಸ ಮತ್ತು ಶೇಕಡವಾರು ವ್ಯತ್ಯಾಸದ ವಿವರಗಳನ್ನು ನೀಡಿರುತ್ತಾರೆ. ಅಲ್ಲದೇ ಸುಮಾರು 20 ದರ್ಜೆ ಶ್ರೀಗಂಧದ ಪೈಕಿ 10 ದರ್ಜೆಯ ಶ್ರೀಗಂಧಕ್ಕೆ ಮಾತ್ರ ಹಾಲಿ ಇರುವ ಚಿಲ್ಲರೆ ಮಾರಾಟ ದರಗಳಿಗಿಂತ ಹೆಚ್ಚಿನ ದರ ಬಂದಿದ್ದು, ಈ ಪೈಕಿ 3 ದರ್ಜೆಯ ಶ್ರೀಗಂಧಕ್ಕೆ ಬಂದಿರುವ ದರ ಸ್ವಲ್ಪ ಹೆಚ್ಚಾಗಿದ್ದು, 4 ದರ್ಜೆಯ ಶ್ರೀಗಂಧಕ್ಕೆ ಈಗಿರುವ ಚಾಲ್ತಿಯ **ದರದ** ಸರಾಸರಿ ದರಕ್ಕಿಂತ ಕಡಿಮೆ ಬಂದಿದ್ದು. ಉಳಿದಂತೆ ಉಲ್ಲೇಖ(1)ರ ಸರ್ಕಾರದ ಆದೇಶದಲ್ಲಿ ಮಂಜೂರಾದ ದರವನ್ನು ಪರಿಷ್ಕರಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಅಪಜೀ 05 ಎಫ್ಎಸ್‌ಡಬ್ಲ್ಯೂ 2016, ಬೆಂಗಳೂರು, ದಿನಾಂಕ: 04.07.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀಗಂಧದ ಚಿಲ್ಲರೆ ಮಾರಾಟ ದರಗಳನ್ನು 2015-16ನೇ ಸಾಲಿಗೆ ಈ ಕೆಳಕಂಡಂತೆ ತಕ್ಷಣ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪರಿಷ್ಕರಿಸಿ ನಿಗಧಿಪಡಿಸಲಾಗಿದೆ.

| ಕ್ರ.ಸಂ | ಶ್ರೀಗಂಧದ ವರ್ಗ | ಚಾಲ್ತಿಯಲ್ಲಿರುವ ಚಿಲ್ಲರೆ ಮಾರಾಟ ದರ ₹. ಲಕ್ಷದಲ್ಲಿ ಪ್ರತಿ ಟನ್‌ಗೆ | 2014-15ನೇ ಸಾಲಿನ ನಾಲ್ಕು ಬಹಿರಂಗ ಹರಾಜಿನಿಂದ ಬಂದ ಸರಾಸರಿ ದರ | | 2015-16ರ ಸಾಲಿಗೆ ಪ್ರಸ್ತಾಪಿಸಿದ ಚಿಲ್ಲರೆ ಮಾರಾಟ ದರ (ಪ್ರತಿ ಕೆಜಿಗೆ) | |
|---|---|---|---|---|---|---|
| | | | ₹. ಲಕ್ಷದಲ್ಲಿ ಪ್ರತಿ ಟನ್‌ಗೆ | ಶೇಕಡಾವಾರು ಹೆಚ್ಚುವರಿ(%) | ₹. ಗಳಲ್ಲಿ ಪ್ರತಿ ಕೆಜಿಗೆ | ಷರಾ |
| 1 | 2 | 3 | 4 | 5 | 6 | 7 |
| A | HEART WOOD | | | | | |
| 1 | Vilayetbud (Billets-I) | 6050 | 0 | 70% | 10285 | 70% ಹೆಚ್ಚುವರಿ |
| 2 | Chinabudh (Billets-II) | 6410 | 10540 | 70% | 10897 | 70% ಹೆಚ್ಚುವರಿ |
| 3 | Panjam (Billets-III) | 5810 | 10375 | 70% | 9877 | 70% ಹೆಚ್ಚುವರಿ |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| 1 | 2 | 3 | 4 | 5 | 6 | 7 |
|---|---|---|---|---|---|---|
| 4 | Ghotla | 6410 | 0 | 0% | 6410 | ಚಾಲ್ತಿಯಲ್ಲಿರುವ ದರಗಳನ್ನೇ ಮುಂದುವರೆಸಿದೆ. |
| 5 | Ghatabadla | 5820 | 8200 | 57% | 9137 | 57% ಹೆಚ್ಚುವರಿ |
| 6 | Bagardad | 5600 | 9675 | 57% | 8792 | 57% ಹೆಚ್ಚುವರಿ |
| 7 | Roots-I | 4100 | 4420 | 20% | 4920 | 20% ಹೆಚ್ಚುವರಿ |
| 8 | Roots-II | 4150 | 5258 | 20% | 4980 | 20% ಹೆಚ್ಚುವರಿ |
| 9 | Roots-III | 4250 | 5192 | 20% | 5100 | 20% ಹೆಚ್ಚುವರಿ |
| 10 | Jajpokal- I | 5160 | 10800 | 112% | 10939 | 112% ಹೆಚ್ಚುವರಿ |
| 11 | Jajpokal- II | 4900 | 10590 | 112% | 10388 | 112% ಹೆಚ್ಚುವರಿ |
| 12 | Ainbagar | 5500 | 6920 | 30% | 22000 | 30% ಹೆಚ್ಚುವರಿ |
| 13 | Cheriya | 4350 | 4310 | 0% | 4350 | ಚಾಲ್ತಿಯಲ್ಲಿರುವ ದರಗಳನ್ನೇ ಮುಂದುವರೆಸಿದೆ. |
| 14 | Ain Chilta | 3655 | 4587 | 25% | 4569 | 25% ಹೆಚ್ಚುವರಿ |
| 15 | Hatri Chilta | 2350 | 2410 | 10% | 4700 | 10% ಹೆಚ್ಚುವರಿ |
| **B** | **MIXED WOOD** | | | | | |
| 16 | Milvachilta | 2153 | 1938 | 0% | 2153 | ಚಾಲ್ತಿಯಲ್ಲಿರುವ ದರಗಳನ್ನೇ ಮುಂದುವರೆಸಿದೆ. |
| 17 | Bosola bukni | 1728 | 1681 | 0% | 1728 | ಚಾಲ್ತಿಯಲ್ಲಿರುವ ದರಗಳನ್ನೇ ಮುಂದುವರೆಸಿದೆ. |
| 18 | Sawdust | 750 | 67 | 0% | 750 | ಚಾಲ್ತಿಯಲ್ಲಿರುವ ದರಗಳನ್ನೇ ಮುಂದುವರೆಸಿದೆ. |
| **C** | **SAP WOOD** | | | | | |
| 19 | White chips | 73 | 78 | 10% | 146 | 10% ಹೆಚ್ಚುವರಿ |
| 20 | Bark & waste | 24 | 0 | 0% | 24 | ಚಾಲ್ತಿಯಲ್ಲಿರುವ ದರಗಳನ್ನೇ ಮುಂದುವರೆಸಿದೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್. ಭಾಗ್ಯಲಕ್ಷ್ಮಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR. 507**

**SC. 100**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59